# ಪಕ್ಷಿಯ ಮಹಾತ್ಮ

ಸತ್ಪುರುಷ ಡಿ. ರೇವಣಸಿದ್ದಪ್ಪ ಮಾಸ್ತರರ ಜೀವನ

ಸಿಂಪಿ ಲಿಂಗಣ್ಣ

# ಅರಿಕೆ

"ಹಳ್ಳಿಯ ಮಹಾತ್ಮ"ವನ್ನು ಬರೆದು ೨೫ ವರುಷಗಳಾದವು. ಈ ಅವಧಿಯಲ್ಲಿ ಅದನ್ನು ಮುದ್ರಿಸುವ ವಿಚಾರವನ್ನು ಅಥರ್ಗಾದ ನನ್ನ ಗೆಳೆಯರು ಅನೇಕ ಸಾರೆ ಮಾಡಿ ಮಾಡಿ ಬಿಟ್ಟರು. ಹಸ್ತಪ್ರತಿಯ ಅದೆಷ್ಟೋ ಪುಟಗಳು ಹರಿದು ಹೋಗಿ ಅಸ್ತವ್ಯಸ್ತವಾಯಿತು. ಈಗ ಅದನ್ನು ಮುದ್ರಿಸುವ ವಿಚಾರ ಬಂದ ಮೇಲೆ ಕಳೆದು ಹರಿದುಹೋದ ಪುಟಗಳನ್ನು ಮತ್ತೆ ಹೇಗೋ ಹೊಂದಿ ಗೂಡಿಸಿತು. ಉಳಿದ ಭಾಗವನ್ನೆಲ್ಲ ಬಹುತಃ ಇದ್ದಕ್ಕಿದ್ದಂತೆ ಇರಿಸಲಾಗಿದೆ. ನನ್ನ ಗೆಳೆಯರೂ ದಿವಂಗತ ಲೋಣಸಿದ್ದಪ್ಪ ಮಾಸ್ತರರ ಶಿಷ್ಯರಾದ ಅಥರ್ಗಾದ ಅದೆಷ್ಟೋ ಜನರು ನೆರವು ನೀಡಿ ಈ ಪುಸ್ತಕವನ್ನು ಪ್ರಕಟಿಸುವುದಕ್ಕೆ ಆರ್ಥಿಕ ಭಾರವನ್ನು ಹೊತ್ತುಕೊಂಡಿದ್ದಾರೆ. ಅದರಿಂದ ಅವರ ಕೃತಜ್ಞತಾ ಬುದ್ಧಿಯು ಪ್ರಕಟವಾಗುತ್ತಲಿದೆ. ಮರೆಯಲ್ಲಿದ್ದ ಒಂದು ಆದರ್ಶ ಜೀವನವನ್ನು ನಾಡಿನ ಕಣ್ಣಮುಂದೆ ತಂದಿದ್ದರಿಂದ ಅದೆಷ್ಟೋ ಜನರ ಕಣ್ಣು ತೆರೆಯಲಿಕ್ಕೆ ಕಾರಣವಾಯಿತು.

ಶ್ರೀ ಚೆನ್ನಮಲ್ಲಪ್ಪನವರು ಹಲಸಂಗಿ ಅವರು ಇಪ್ಪತ್ತೈದು ವರುಷಗಳ ಮೊದಲು "ಹಳ್ಳಿಯ ಮಾಸ್ತರ ಮಹಾತ್ಮ" ಎಂಬ ಚಿಕ್ಕ ಲೇಖನವನ್ನು 'ನವಕರ್ನಾಟಕ'ದಲ್ಲಿ ಪ್ರಕಟಿಸಿದರು. ಅದರಲ್ಲಿ ಒಂದೆ ಬಗೆ ಮಹಾತ್ಮರೇ ಈ 'ಹಳ್ಳಿಯ ಮಹಾತ್ಮ'. ಅದಕ್ಕೆಂತಲೇ ಈ ಪುಸ್ತಕಕ್ಕೆ ಆ ಹೆಸರು ಇಡಲಾಗಿದೆ.

ಒಬ್ಬ ಆದರ್ಶ ಶಿಕ್ಷಕನಿಂದ ಹಳ್ಳಿಯ ಉದ್ಧಾರವು ಅದು ಹೇಗೆ ಆಗುವುದೆಂಬುದನ್ನು ಇದರಲ್ಲಿಯ ಜೀವನವನ್ನು ನಿರೀಕ್ಷಿಸಿದವರಿಗೆ ಗೊತ್ತಾಗುವದು. ಈ ಚರಿತ್ರವು ಶಿಕ್ಷಕರಿಗೆ ಆದರ್ಶವಾಗುವಂತೆ ನಾಡಿಗರಿಗೂ ಮನನೀಯವಾಗುವದೆಂದು ಬಗೆದಿರುವೆನು.

ಇನ್ನು ನಮ್ಮ ಪುಸ್ತಕ ಮುದ್ರಿಸುವದಕ್ಕೆ ಸಂಪೂರ್ಣ ಹಣ ಕೊಟ್ಟು ಸಹಾಯ ಸಲ್ಲಿಸಿದ ತರುಣ ಮಿತ್ರರಾದ --ಶ್ರೀ. ಮಲ್ಲಪ್ಪ ರಾವುತಪ್ಪ ಗಂಟಿ ಇವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಮತ್ತು ಸುಂದರವಾಗಿ ಮುದ್ರಿಸಿ ಕೊಟ್ಟ ಸಾಧನ ಪ್ರೆಸ್ಸಿನ ಶ್ರೀ. ಕುಲಕರ್ಣಿ ಶೇಷಗಿರಿರಾಯರಿಗೆ ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಚಡಚಣ
೮–೧೨–೧೯೫೧

— ಸಿಂಪಿಲಿಂಗಣ್ಣ

# ಮಾರಾಟಕ್ಕೆ ಸಿದ್ಧವಿರುವ
# ಸಿಂಪಿ ಲಿಂಗಣ್ಣರವರ ಕೃತಿಗಳು

| | | |
|---|---|---|
| ೧. | ಶ್ರೀ. ಅರವಿಂದರು (ಚರಿತ್ರ) .... | ೧-೧೨-೦ |
| ೨. | ಧರ್ಮ ಹಾಗೂ ರಾಷ್ಟ್ರೀಯತ್ವ (ಶ್ರೀ ಅರವಿಂದರು).... | ೧- ೮-೦ |
| ೩. | ಶ್ರೀ. ಅರವಿಂದರ ಪತ್ರಗಳು ,, .... | ೦- ೮-೦ |
| ೪. | ಉತ್ತರಪಾಡಾ ಉಪನ್ಯಾಸ ,, .... | ೦- ೬-೦ |
| ೫. | ಧರ್ಮಕ್ಷೇತ್ರೇ ಕುರುಕ್ಷೇತ್ರೇ ,, .... | ೦- ೮-೦ |
| ೬. | ಭಾರತದ ಭವ್ಯಸಿದ್ಧತೆ (ಇತಿಹಾಸ ನಿರೀಕ್ಷಣೆ) .... | ೧- ೮-೦ |
| ೭. | ಸ್ವರ್ಗಸೋಪಾನಗಳು .... | ೧- ೮-೦ |
| ೮. | ಸಂಗಮಜೀವನ (ಕವನ ಸಂಗ್ರಹ) .... | ೧- ೮-೦ |
| ೯. | ಪೂಜಾ (ಗದ್ಯ ಗೀತಗಳು) .... | ೦-೧೨-೦ |
| ೧೦. | ಭಕ್ತರಾಜ ಬಸವಣ್ಣ (ಅಂತರಂಗ ಜೀವನ) .... | ೦-೧೨-೦ |
| ೧೧. | ವತ್ತ್ರಸಾಹಿತ್ಯ (ಶ್ರೀ. ಬೇಂದ್ರೆ ಅವರ ಸಾಹಿತ್ಯ ಪರಿಚಯ) .... | ೧- ೮-೦ |
| ೧೨. | ಬಟ್ಟೆದ ಹೊಳೆ (ಕಾದಂಬರಿ) .... | ೧- ೪-೦ |
| ೧೩. | ಪವಿತ್ರ ಜೀವನ (ಟಾಲಸ್ಟಾಯರ ಕತೆಗಳು) .... | ೧- ೯-೦ |
| ೧೪. | ಜೀವನಸೃಷ್ಟಿ (ವಿವಿಧ ಪ್ರಬಂಧಗಳು) .... | ೧- ೨-೦ |
| ೧೫. | ಯೋಗದೀಕ್ಷೆ (ಶ್ರೀ. ಅನಿಲಬರಣರಾಯರು ಆಶ್ರಯದೊಡನೆ ನಡೆಸಿದ ಪತ್ರವ್ಯವಹಾರ) .... | ೧- ೦-೦ |

— **ಶ್ರೀ ಅರವಿಂದ ಗ್ರಂಥಾಲಯ**
**ಚಡಚಣ** (P. O.)
**ವಿಜಾಪುರ**

---

## ಶ್ರೀ. ಅರವಿಂದ ಮಂಡಲದಿಂದ
ಶೀಘ್ರವೇ
## ಪ್ರಕಟವಾಗತಕ್ಕ ಪುಸ್ತಕಗಳು

| | | |
|---|---|---|
| ೧. | ಸುಂದರ ಕಥೆಗಳು | (ಶ್ರೀ ತಾಯಿಯವರು) |
| ೨. | ಪೂರ್ಣಯೋಗ | (ಶ್ರೀ ನಲಿನಿಕಾಂತ ಗುಪ್ತರು) |
| ೩. | ಮಾತೃವಾಣಿ | (ಕವನರೂಪದಲ್ಲಿ) |
| ೪. | ಯೋಗಪ್ರದೀಪ | (ಶ್ರೀ ಅರವಿಂದರು) |



ಶ್ರೀ. ರೇವಣಸಿದ್ದಪ್ಪ ಅವರಸಂಗ
ಶಿ ವ ಶ ರ ಣ ರು
ಅಥರ್ಗಾ

ಓಂ ! ಭಗವತೀ ! !

# ಹಳ್ಳಿಯ ಮಹಾತ್ಮ

## ( ಹತ್ತರಕಿ ರೇವಣಸಿದ್ದಪ್ಪ ಮಾಸ್ತರರ ಜೀವನ )

## ೧. ಜನ್ಮ

"ಜಿನದತ್ತ ಜಿನಸ್ವಾಮಿ ಹೊನ್ನಪಾರ್ಶ್ವನಾಥ" ನಿನ್ನಂಥ ಒಬ್ಬ ಮಗ ಬೇಕು ||

—ಗರತಿಹಾಡು

ದೊಡ್ಡವರು ಇಂಥ ದೇಶದಲ್ಲಿಯೇ ಹುಟ್ಟಿಬರಬೇಕೆಂಬ ನಿಯಮವಿಲ್ಲ; ಅದಕ್ಕೆ ಶ್ರೀಮಂತಿಕೆ-ಬಡತನಗಳ ಕಾರಣವಿಲ್ಲ; ಹಳ್ಳಿಪಟ್ಟಣಗಳ ಭೇದವಿಲ್ಲ; ಜಾತಿ ಪಂಗಡಗಳ ತಾರತಮ್ಯವಿಲ್ಲ; ಕಲಿತವರು ಕಲಿಯದನರು ಎಂಬ ಲೆಕ್ಕವಿಲ್ಲ. ದೇವನು ಮಾನವನಾಗಿ ಇಳಿಯದೆ ಮಾನವನೇ ದೇವನಾಗಿ ಏರಬೇಕಾಗಿರುವದರಿಂದ ವಂಶ-ಸ್ಥಳ-ಕಾಲ ಇವು ಮಾನವನನ್ನು ರೂಪಿಸುತ್ತಿರುತ್ತವೆಂಬ ಮಾತನ್ನು ಯಾರೂ ಅಲ್ಲಗಳೆಯುವಂತಿಲ್ಲ. ಎಂಟುನೂರು ವರುಷಗಳ ಹಿಂದೆ ಯಾವ ಬಸವಾದಿ ಶರಣರು ಹುಟ್ಟಿಬಂದು ಕಲ್ಯಾಣ ನಾಡನ್ನು ಕಟ್ಟಿದರೋ ಆ ಶಿವಶರಣರ ಸತ್ವವು ಈ ಭೂಮಿಯಲ್ಲಿ ಸಾಕಷ್ಟಿದೆಯೆನ್ನುವುದನ್ನು ಲಕ್ಷ್ಯಿಸತಕ್ಕ ಮಾತಾಗಿದೆ. ಒಂದು ಸಾರೆ ಹುಲುಸಾಗಿ ಬೆಳೆದ ಭೂಮಿಯಲ್ಲಿ ಕೆಲವೊಂದು ವರುಷ ಏನೂ ಬಿತ್ತದಿದ್ದರೂ ತಮ್ಮಿಂದ ತಾವೇ ನಾಟಿಗೆಗಳು ತಲೆಯೆತ್ತಿ ಸುಫಲವಾಗುತ್ತಿರುವುದನ್ನು ನಾವೆಲ್ಲರೂ ಕಣ್ಣಾರೆ ಕಾಣುತ್ತಿರುವ ಮಾತಾಗಿದೆ. ಬಾಗೇವಾಡಿಯು ಬಸವಣ್ಣನವರ ಜನ್ಮಭೂಮಿಯಷ್ಟೇ ? ಆ ಬಾಗೇವಾಡಿಯು ಡೋಣಿಸಾಲಿನಲ್ಲಿ ಒಂದು ಗ್ರಾಮವಾಗಿರುವಂತೆ ಮನಗೂಳಿಯೆನ್ನುವ ಗ್ರಾಮವೂ ಒಂದು ಅದೇ ಬೆಳೆಯುಳ್ಳ ಭೂಮಿಯ ನಡುವಿರುವಂಥದಾಗಿರುತ್ತದೆ. ಡೋಣಿ ಬೆಳೆದರೆ ಓಣಿಯೆಲ್ಲ ಜೋಳವೆನ್ನುವ ಮಾತು ಸತ್ಯವಾಗಿರುವಂತೆ ಅಲ್ಲಿ ಮೈದಾಳಿದ ಸತ್ಪುರುಷರು ತಮ್ಮ ಮಟ್ಟಿಗೆ ತಾವು ಜೀವನಸಾರ್ಥಕ್ಯ ಮಾಡಿಕೊಳ್ಳುವುದರ ಜೊತೆಗೆ ತಮ್ಮ ಸುತ್ತುಮುತ್ತಲಿನ ಅನೇಕ ಜೀವಿಗಳ ಜೀವನವನ್ನೂ

ಸಾರ್ಥಕಗೊಳಿಸಲು ಕಾರಣರಾಗುವರೆಂಬ ಮಾತು ನಮ್ಮ ರೇವಣಸಿದ್ದಪ್ಪ ಮಾಸ್ತರರ ಜೀವನದಿಂದ ಸ್ಪಷ್ಟವಾಗುತ್ತದೆ.

ಮನಗೂಳಿಯು ಬಾಗೇವಾಡಿಯ ನೆರೆಯ ಗ್ರಾಮವಾಗಿ ಬಸವನ ಪುಣ್ಯಾಂಶವನ್ನು ಶತಶತಮಾನಗಳಿಂದ ಸಂರಕ್ಷಿಸಿಕೊಂಡು ಬಂದಿದೆ. ಬಸಪ್ಪ ಅವರಸಂಗ ಎಂಬವರು ಲಿಂಗನಿಷ್ಠರೂ ಸತ್ಯವಾದಿಗಳೂ ಸದ್ಗುಣಿಗಳೂ ಆಗಿ ನಾಲ್ವರು ಮಕ್ಕಳಿಗೆ ತಂದೆಯಾಗಿ ತೃಪ್ತಜೀವನವನ್ನು ಸಾಗಿಸಿಕೊಂಡಿದ್ದರು. ಆ ನಾಲ್ವರು ಅಣ್ಣ ತಮ್ಮಂದಿರಲ್ಲಿ ಹಿರಿಯವರಾದ ಮೂವರು ಪೂರ್ವ ವಯಸ್ಸಿನಲ್ಲಿಯೇ ಜೀವನವನ್ನು ಮುಗಿಸಿದರು ಉಳಿದವರು ಕಿರಿಯರಾದ ಶಿವಪ್ಪನವರು. ಅವರು ದೈವನಿಷ್ಠರೂ ಪ್ರಾಮಾಣಿಕರೂ ಆಗಿದ್ದಲ್ಲದೆ, ದೇವರಲ್ಲಿ ಅತ್ಯಂತ ಶ್ರದ್ಧೆಯುಳ್ಳವರೂ ಸಾಧುಸಂತರಲ್ಲಿ ಪ್ರೇಮವುಳ್ಳವರೂ ಆದ ಲಕ್ಷ್ಮೀಬಾಯಿಯೆಂಬ ಸಹಧರ್ಮಿಣಿಯೊಡನೆ ಸಂಸಾರ ಶಕಟವನ್ನು ನಡೆಸುತ್ತಿದ್ದರು. ಲಕ್ಷ್ಮೀಬಾಯಿಯು ತವರು ಮನೆಯವರು ಶ್ರೀಮಂತ ರಾಗಿದ್ದರಿಂದ ಆಕೆಯು ಲಕ್ಷ್ಮೀಪುತ್ರಿಯೇ ಆಗಿದ್ದಳು. ಆದರೆ ಅವಳು ಲಕ್ಷ್ಮಿಯಾಗಿದ್ದುದು ಹೊರಜೀವನದಲ್ಲಿ ಅಲ್ಲ; ಒಳಜೀವನದಲ್ಲಿ. ಹೊರಗಿನ ವೈಭವಕ್ಕಿಂತ ಒಳಗಿನ ವೈಭವವು ಆಕೆಯಲ್ಲಿ ತುಂಬಿತುಳುಕುತ್ತಿತ್ತು. ಆಕೆಗೆ ವೇಷಭೂಷಗಳ ಆಡಂಬರ ಬೇಕಿರಲಿಲ್ಲ; ಬಡವರಂತೆ ಸುಲಭ ಜೀವನವು ಅವಳದಾಗಿತ್ತು. ಬಡವರನ್ನು ಕಂಡರೆ ಅವಳ ಅಂತಃಕರಣವು ಉಕ್ಕಿಬಂದು ಕರುಣೆಯನ್ನು ಸುರಿಸುತ್ತಿತ್ತು. ಶಿವಪ್ಪನ ದೈವನಿಷ್ಠೆ ಪ್ರಾಮಾಣಿಕತೆಗಳೊಂದಿಗೆ ಲಕ್ಷ್ಮೀಬಾಯಿಯ ಸರಳ ಜೀವನ, ಕರುಣಾಪೂರಿತ ಮನಸ್ಸು ಇವುಗಳ ಲಗ್ನವಾಗಿತ್ತೆನ್ನುವ ಹಾಗೆ ಆ ದಾಂಪತ್ಯ ಜೀವನವು ಕಂಗೊಳಿಸುತ್ತಿತ್ತು. ಅಂಥವರ ಹೊಟ್ಟೆಯಲ್ಲಿ ನಮ್ಮ ರೇವಣಸಿದ್ದಪ್ಪ ಮಾಸ್ತರರು ಹುಟ್ಟಿಬಂದರು. ಅವರಲ್ಲಿ ತಂದೆತಾಯಿಗಳ ದಿವ್ಯಗುಣಗಳು ಬೀಜರೂಪದಲ್ಲಿ ಅಡಕವಾಗಿದ್ದ ವೆನ್ನುವುದನ್ನು ಬೇರೆಯಾಗಿ ಹೇಳುವ ಕಾರಣವಿಲ್ಲ.

ಹತ್ತೊಂಬತ್ತನೇ ಶತಮಾನದ ಕಗ್ಗತ್ತಲೆಯ ರಾತ್ರಿ ಸರಿದು ನಸುಕು ಹರಿಯುವ ಸಂಧಿ ಭಾರತದ ಮೆದುಳಾದ ಬಂಗಾಲವು ಎಚ್ಚತ್ತ ಸಮಯ. ಭಾರತದ ಅಗಸೆಯಾದ ಮುಂಬಯಿಯು ತನ್ನ ಮಹಾದ್ವಾರವನ್ನು ತೆರೆದು ಹೊಸಗಾಲದ ಆಂದೋಲನವನ್ನು ಬರಮಾಡಿಕೊಳ್ಳುವ ಕುತೂಹಲ ಪ್ರಸಂಗ. ಭಾರತ ಸ್ವಾತಂತ್ರ್ಯವನ್ನು ಅಣಿಗೊಳಿಸಿ ಕೊಡುವ ರಾಷ್ಟ್ರೀಯ ಸಭೆಯು

ಜನ್ಮಿಸ್ರಿಸಿ ಅದೇ ನಾಲ್ಕು ವರುಷಗಳಾಗಿದ್ದವು. ದೇಶದಲ್ಲೆಲ್ಲ ಎದ್ದ ಮಿಸುಕಾಟದ ಅಲೆಗಳು ಕರ್ನಾಟಕದಲ್ಲಿಯೂ ತರಂಗಗಳನ್ನೆಬ್ಬಿಸಿದ್ದವು. ಆ ಚೇತನವು ತಂಗಾಳಿಯಂತೆ ಹಳ್ಳಿ-ಹಳ್ಳಿಗರೆನ್ನದೆ ಸರ್ವರಲ್ಲಿಯೂ ಸುಪ್ತಶಕ್ತಿಯನ್ನು ತಗುಲಿಸುತ್ತ ಸುಳಿಯುತ್ತಿದ್ದಿತು. ಅಂಥ ಮಂಗಲ ಪ್ರಭಾತವನ್ನು ಸೂಚಿಸುವ ಕ್ಷಣವೊಂದರಲ್ಲಿ ರೇವಣಸಿದ್ದಪ್ಪ ಮಾಸ್ತರರು ತಮ್ಮ ಪುಣ್ಯ ಶರೀರವನ್ನೆತ್ತಿ ಬಂದುದು ಅಂದು ೧೯೨೯ನೇ ಇಸವಿ ಮೇ ಇಪ್ಪತ್ತಾರನೇ ದಿನಾಂಕವಿತ್ತು.

ಹಳ್ಳಿಯ ಒಂದು ಸಾಮಾನ್ಯ ಮನೆತನದಲ್ಲಿ ಒಂದು ಕೂಸಿನ ರೂಪದಲ್ಲಿ ಬರುವ ಮಹಾಪುರುಷರನ್ನಾಗಲಿ ಸಾಧಾರಣ ಮನುಷ್ಯನನ್ನಾಗಲಿ ಅಂದೇ ಯಾರು ಗುರುತಿಸುವರು? ಎಲ್ಲ ಕೂಸುಗಳಂತೆ ಅದೂ ಒಂದು ಕೂಸು. ತಾನು ಮೈದೊಟ್ಟು ಬಂದು ಯಾವ ಸಂದೇಶವನ್ನು ಲೋಕದಲ್ಲಿ ಬೀರ ಬೇಕಾಗಿದೆಯೆಂಬ ಮಾತು ಆ ಕೂಸಿಗೂ ಆಗ ತಿಳಿದಿರುವದಿಲ್ಲ. ಆದರೆ ತಾಯಿ ತಂದೆಗಳ ಆನಂದಕ್ಕೆ ಅಳತೆಯಿರುವದಿಲ್ಲ. "ಮಗ ನಿನ್ನ ಹಡಿಲಾಕ ಮುಗಿಲ ಮುಟ್ಟಿತ ಜೀವ" ಎಂಬ ಹಾಡು ತಾಯಿಯ ಪಾಲಿಗೆ ಪಾಡಾಗಿ ಬಿಡುವದು. ಅದರಂತೆ 'ಲಕ್ಷ್ಮಿಬಾಯಿಯು ಸಹ ಮಗ್ಗುಲಲ್ಲಿ ತಂಗಿದ ಮಾನವನ ತಂದೆ ಯಾದ ಮಗುವನ್ನು ಕಂಡು ಎಲ್ಲರಂತೆ

"ಕಾಮನಂಥ ಕಣ್ಣು ಭೀಮನಂಥ ಹುಬ್ಬು।
ರಾವಣನಕಿಂತ ನಡುಸಣ್ಣ। ನನ ಬಾಲ।
ಹುಲಿಯ ನಿನಗ್ಯಾರು ಕೆಣಕ್ಯಾರ॥"

ಎಂದು ಹಾಡಿಕೊಂಡಿರಬಹುದು. ಹೆಸರಿಲ್ಲದೆ ಬಂದ ಆ ಶಿಶುದೇವತೆಗೆ ತಮ್ಮ ಕುಲದೈವವೆಂದೋ ಇಷ್ಟದೈವವೆಂದೋ ಭಾವಿಸಿ ರೇವಣಸಿದ್ದಪ್ಪನೆಂದು ಕೂಗಿ ಕರೆದಿರಬಹುದು. ಶಿವಪ್ಪನವರಿಗೆ ರೇವಣಸಿದ್ದ ಶಿಶುವು ಮಾನವನ ತಂದೆಯಾಗಿ ಕಂಗೊಳಿಸಿರಬಹುದು. "ಬೆಳ್ಳಾನ ಬಿಳಿಯೆತ್ತ ಬೆಳ್ಳಿಯ ಬಾರಕೋಲ। ಹಳ್ಳದ ಹೊಲವ ಹರಗ್ಯಾನ। ಬಾಲಾನ। ತೆಳ್ಳನ ಹೊಟ್ಟಿ ಹಸದಾವ." ಎನ್ನುವ ಚಿತ್ರವು ಆತನ ಭವಿಷ್ಯತ್ ಕಲ್ಪನೆಯ ಪರದೆಯ ಮೇಲೆ ಮೂಡಿ ಮಾಯವಾಗಿರಬಹುದು.

ಒಟ್ಟಾರೆ ರೇವಣಸಿದ್ದನು ತಾಯಿಯ ಕಣ್ಣಮಣಿಯಾಗಿಯೂ, ಮನೆಯ ಬೆಳಕಾಗಿಯೂ, ಹೊಳೆದನಲ್ಲದೆ, ಹಳ್ಳಿಯ ಕಲ್ಪತರುವಾಗಿಯೂ, ಸಮಾಜದ ತೇಜವಾಗಿಯೂ ಮೆರೆಯಬಲ್ಲನೆಂಬ ಹೊಳಹು ಆಗ ಯಾರ ಕಣ್ಣಮುಂದೆಯೂ ಮೂಡಿರಲಾರದು.

---

# ೨. ಬಾಲ್ಯ ಹಾಗೂ ವಿದ್ಯಾಭ್ಯಾಸ

**ತೊಡರ್ವರಾಯುರನೊರಸಿದಪನೆಂದು ನುಡಿನುಡಿದು । ನುಡಿಗಲಿತು, ರಣದೊಳಾಂತವರ ಸರ್ವಸ್ವಮಂ ಪಿಡಿಪಿಡಿದು ನಿಂದಿರಗಲಿತು, ಹಗೆಯು ಬಯ್ತಲೆಯು ಬಟ್ಟೆಯೊಳೋವ್ದುಯ್ಯುಂ ॥**
**ನಡೆನಡೆದು ನಡೆಗಲಿತು ರಿಪುಗಳಲಿ ಕಪ್ಪವುಂ । ಬಿಡಬಿಡದೆ ಕೊಂಡು ಕೊಂಡುಣಕಲಿತು, ಕೀರ್ತಿಯೊಡ । ನೊಡನೆ ಪರಿಪರಿದು ಪರಿದಾಡ ಕಲಿತಂ, ಕುಮಾರನು ॥—ರಾಘವಾಂಕ.**

ಬೆಳೆಯು ಸಿರಿಯು ಮೊಳಕೆಯಲ್ಲಿಯೇ ಕಾಣಿಸುತ್ತದೆನ್ನುವ ಮಾತು ಹದಿನಾರಾಣೆಯು ಸತ್ಯ. ರೇವಣಸಿದ್ಧಪ್ಪನವರು ಯಾವ ಜಾತಿಯ ಮರವೆನು ವುದನ್ನು ಚಿಕ್ಕಂದಿನಲ್ಲಿಯೇ ಕಾಣಿಸಿಕೊಂಡರು. ಆದರೆ ಆಗ ಅದರ ಪರೀಕ್ಷೆಯು ಬಹುಜನರಿಗೆ ಆಗಿರಲಾರದು. ಐದು ವರುಷ ತುಂಬುವ ವರೆಗೆ ಅವರು ನಡೆಸಿದ ಬಾಲಲೀಲೆಗಳ ವೃತ್ತಾಂತವು ನಮಗೆ ತಿಳಿಯದು. ಆದರೆ ಆರುವರುಷ ತುಂಬಲು ಅವರ ಅಕ್ಷರಾಭ್ಯಾಸವು ಆರಂಭವಾಗಬೇಕಲ್ಲವೇ? ಅವರ ನೆರೆಮನೆಯ ಸದ್ಗೃಹಸ್ಥರಾದ ಶ್ರೀ ಉಮ್ಮಣ್ಣ ಜೈನ ಎಂಬವರು ಅವರಿಗೆ ಅಕ್ಷರ ಪರಿಚಯ ಮಾಡಿಸುವ ಪಾತ್ರವಹಿಸಿದರು. ರೇವಣ ಸಿದ್ಧಪ್ಪನವರಿಗೆ ಅದೇ ಆರುವರುಷ ತುಂಬಿದ್ದವು. ಹಲಗೆ-ಬಳಪ ಅವರ ಕೈಗೆ ಕೊಟ್ಟು ಅಕ್ಷರಾಭ್ಯಾಸವನ್ನು ಆರಂಭಿಸಿದರು. ಆರಂಭಿಸುವುದೇ ತಡ ಅಕ್ಷರ ಹಾಗೂ ಅಂಕಿಗಳ ಜ್ಞಾನವು ಮುಗಿದೇ ಹೋಯಿತು. ಅದಕ್ಕೆ ಏಳೆಂಟು ದಿನಗಳು ಮಾತ್ರ ಸಾಕಾದವು. ಮರೆತು ಹೋದ ಕತೆಯನ್ನು ನೆನಪು ಮಾಡಿಕೊಂಡಂತೆ ಅವರು ಅಕ್ಷರಗಳನ್ನೂ ಅಂಕಿಗಳನ್ನೂ ಕಲಿತು ಕೊಂಡರು. ಅಷ್ಟಾದ ಬಳಿಕ ಶ್ರೀ ಉಮ್ಮಣ್ಣನವರಲ್ಲಿ ಅವರ ಕೆಲಸವೇ ಉಳಿಯಲಿಲ್ಲ. ಆ ಮೇಲೆ ಶಾಲೆಗೆ ಹೋದರು.

ಶಾಲೆಯೆಂದರೆ ದನಗಳ ದಡ್ಡಿಯೆಂದೂ ಶಿಕ್ಷಕರೆಂದರೆ ಕಠೋರ ಮನಸ್ಸಿನ ಘಟುಕರೆಂದೂ ಕೆಲವು ಬಾಲಕರಿಗೆ ಕಂಡುಬರುತ್ತಿರುವಂತೆ ತೋರುತ್ತದೆ ಅಂಥವರಿಗೆ ಅಕ್ಷರ ಪರಿಚಯವಾಗಲು ಒಂದು ವರುಷವಂತೂ ಸಾಕಾಗುವದೇ ಇಲ್ಲ. ಎರಡೋ ಮೂರೋ ವರುಷಗಳಾದ ಮೇಲೆ ಅವರು ಆ ನಿಲವನ್ನು ದಾಟುತ್ತಾರೆ. ಅವರಿಗೆ ಶಾಲೆಗೆ ಹೋಗುವುದೆಂದರೆ ಮುಳ್ಳು

ಹಾಸಿಗೆ ತುಳಿದಂತಾಗುವುದೂ, ಶಾಲೆಯ ಪಾಠವೆಂದರೆ ಕಲ್ಲು ಕಡಲೆಯನ್ನು ತಿಂದಂತಾಗುವುದೂ ಸಹಜವೇ ಅದೆ. ಅವರು ಗುರುಗಳ ಅಪ್ಪಣೆ ಪಾಲಿಸುವುದಾಗಲಿ ನಿತ್ಯದ ಪಾಠವನ್ನು ಒಪ್ಪಿಸುವುದಾಗಲಿ ಬಹಳ ಬಿಗಿಯೆನಿಸುತ್ತದೆ. ಆದರೆ ರೇವಣಸಿದ್ದಪ್ಪನವರಂಥ ಬಾಲಕರಿಗೆ ಶಾಲೆಗೆ ಹೋಗುವುದೆಂದರೆ ಉಬ್ಬಿನ ಕೆಲಸ. ಗುರುಗಳು ಹೇಳಿದ ಪಾಠ ಒಪ್ಪಿಸುವುದು ಸಹಜದ ಆಟ. ಉಬ್ಬಿನ ಮನಸ್ಸು ಆಟದಂತೆ ಶಾಲೆಯ ಚಟುವಟಿಕೆ ಅವರಲ್ಲಿರುವುದರಿಂದ ಅಂಥ ವಿದ್ಯಾರ್ಥಿಗಳಲ್ಲಿ ವಿನಯವಾಗಲಿ ಓರಣವಾಗಲಿ ತನ್ನಿಂದ ತಾನೇ ಮೊಳೆತು ಬರುತ್ತವೆ. ಆ ಮೊಳಕೆಯಲ್ಲಿ ಬುದ್ಧಿಕೌಶಲ್ಯವು ಕಂಗೊಳಿಸುತ್ತದೆ. ಅಲ್ಲಿ ಗುರುಗಳು ಮೆಚ್ಚುಗೆಯನ್ನು ತೋರ್ಪಡಿಸುತ್ತಾರೆ. ಅವರ ಮೆಚ್ಚುಗೆಗೆ ಪಾತ್ರನಾದ ವಿದ್ಯಾರ್ಥಿಯು ಗುರುಗಳು ಹೇಳಿಕೊಟ್ಟಿದ್ದು ಒಂದಾದರೆ ತಾನು ಗ್ರಹಿಸಿಕೊಳ್ಳುವುದು ನಾಲ್ಕು. ರೇವಣಸಿದ್ದಪ್ಪನವರು ಗುರುಗಳ ಮೆಚ್ಚಿಗೆ ಪಡೆದಂತೆ ಸಹಪಾಠಿಗಳ ನಲುಮೆಯನ್ನೂ ಸಂಪಾದಿಸಿದ್ದರು. ಗುರುಗಳ ಅಕ್ಕರತೆಯನ್ನು ಗಳಿಸಿದ ಎಷ್ಟೋ ಜಾಣ ವಿದ್ಯಾರ್ಥಿಗಳು ಉಳಿದ ಸಹಪಾಠಿಗಳನ್ನು ಆಳುವ ಅಧಿಕಾರ ತೋರಿಸುತ್ತಿರುವದುಂಟು.

ಶಾಲೆಯ ವಿದ್ಯಾಭ್ಯಾಸದಲ್ಲಿ ಅವರು ಮುಂದಾಳುವಾದಂತೆ ಆಟಗಳಲ್ಲಿಯೂ ಒಲವುಳ್ಳವರಾಗಿದ್ದರು. ಒಮ್ಮೆ ತಮ್ಮ ಸಂಗಡಿಗರೊಂದಿಗೆ ತಿಳ್ಳಿಯಾಡುತ್ತಲಿರುವಾಗ ಆಟದ ಭರದಲ್ಲಿ ವೇಳೆಯ ಪರಿವೆಯೇ ಉಳಿಯಲಿಲ್ಲ. ಸಂಜೆಯಾಯಿತು, ನಸುಕಾಯಿತು, ರಾತ್ರಿಯಾಯಿತು. ಮಗನಿನ್ನೂ ಮನೆಗೆ ಬರಲಿಲ್ಲವೆಂದು ಅವರ ತಂದೆ ಅವರನ್ನು ಹುಡುಕುತ್ತ ಬಂದರು. ಆ ತಿಳ್ಳಿಯಾಟದ ಗುಂಪಿನಲ್ಲಿ ರೇವಣಸಿದ್ದಪ್ಪನವರು ಸಿಕ್ಕರು. ತಡಮಾಡಿದ ತಪ್ಪು, ಹುಡುಕಾಡಿದ ಬೇಸರ ಇವುಗಳಿಂದ ಸಿಟ್ಟಿಗೆದ್ದ ತಂದೆಯು ರೇವಣಸಿದ್ದಪ್ಪನವರಿಗೆ ಒಂದು ಏಟು ಕೊಟ್ಟು ಮನೆಗೆ ಕರೆದೊಯ್ದರು. ಆಯ್ತು ಅಂದಿನಿಂದ ಅವರ ಆಟನೋಟಗಳ ಒಲವು ಮುರುಟಿಹೋಯಿತು. ಅವರ ತಂದೆಯವರ ಈ ಉಪಾಯವು ಎಲ್ಲರೂ ಒಪ್ಪತಕ್ಕ ಮಾತಾಗಲಾರದು. ಅವರು ಅಂದು ರೇವಣಸಿದ್ದಪ್ಪನವರಿಗೆ ಹೊಡೆದು ಆಟ ಬಿಡಿಸಿ ಕರೆದೊಯ್ಯದಿದ್ದರೆ ಅವರಲ್ಲಿ ಸಾರ್ವಜನಿಕ ಜೀವನಕ್ಕೆ ಶೋಭೆಯನ್ನುಂಟುಮಾಡುವ ಬೇರೆ ಎಷ್ಟೋ ಸದ್ಗುಣಗಳು ಅಂಕುರಿಸಬಹುದಾಗಿತ್ತು. ಆದರೆ ಅಷ್ಟೊಂದು ಪುಣ್ಯವು ರೇವಣಸಿದ್ದಪ್ಪನವರಿಗೆ ಇರಲಿಲ್ಲವೆನ್ನಬೇಕು. ಆಟ

ನೋಟಗಳಲ್ಲಿ ಉಳಿಯುವ ವೇಳೆಯನ್ನೂ ಅವರು ತಮ್ಮ ಅಭ್ಯಾಸದಲ್ಲಿಯೇ ಕಳೆಯತೊಡಗಿದರು.

ಅಭ್ಯಾಸವೇ ಮುಖ್ಯವಾದ ವಿದ್ಯಾರ್ಥಿಗೆ ಶಾಲೆ ಇಲ್ಲವೆ ಮನೆ ಇವುಗಳ ಹೊರತು ಇನ್ನಾವ ಸ್ಥಳವೂ ಬೇಕಾಗದು. ಎರಡೇ ಎರಡು ನಿಯಮಿತ ಸ್ಥಳ. ಒಂದೇ ಒಂದು ನಿಯಮಿತ ಅಭ್ಯಾಸ ಆಗಿಬಿಟ್ಟರೆ ಮನಸ್ಸಿಗೆ ಬೇಸರ ಬರುವುದು ಸ್ವಾಭಾವಿಕ. ಅಭ್ಯಾಸಕ್ಕೆ ಬೇಸರ ಬಂದಾಗ, ಇನ್ನೆಲ್ಲಿಯೂ ಹೋಗಲು ಸ್ಥಳವಿಲ್ಲವಾದರೆ ಕುಳಿತಲ್ಲಿಯೇ ಕುಳಿತ ಮನಸ್ಸು ತನ್ನ ರಂಜನೆಗಾಗಿ ಬೇರೊಂದು ಉಪಾಯವನ್ನು ಹುಡುಕಿಕೊಳ್ಳುವದು. ರೇವಣಸಿದ್ದಪ್ಪನವರ ಮನಸ್ಸು ಯಾವ ಉಪಾಯವನ್ನು ಹುಡುಕಿಕೊಂಡಿತೆಂದರೆ— ದೈವ ಚಿಂತನೆ. ಅದರ ಅಂಗವಾಗಿ ಲಿಂಗಪೂಜೆ ಹಾಗೂ ಸತ್ಪುರುಷರ ಜೀವನ ಚರಿತ್ರಗಳನ್ನು ಓದುವುದು. ಇವುಗಳಲ್ಲಿ ಅವರ ಅಭಿರುಚಿಯು ಬೆಳೆದು ಬರತೊಡಗಿತು. ಆಗ ಅವರ ವಯಸ್ಸು ಹನ್ನೊಂದು ಹನ್ನೆರಡು ಇರಬಹುದು. ಶಾಲೆಯಲ್ಲಿ ೪ನೇ ಅಥವಾ ೫ನೇ ಇಯತ್ತೆಯ ವಿದ್ಯಾರ್ಥಿಯಾಗಿರಬಹುದು.

ಶಾಲೆಯ ಬಾಲಕರೊಡನೆ ಆಟವಾಡುವುದು ತಪ್ಪಿದರೆ ಶಾಲೆಯೂ ತಪ್ಪಲೆಂದು ಆಟದೊಡನೆ ಅಭ್ಯಾಸವನ್ನೂ ಬಿಟ್ಟುಕೊಟ್ಟು ಉಡಾಳರಾಗುವ ಹಾದಿಯನ್ನು ಅದೆಷ್ಟೋ ವಿದ್ಯಾರ್ಥಿಗಳು ಹಿಡಿಯುವುದುಂಟು. ಅಂಥ ದೃಷ್ಟಿಮಣಿಗಳು ತಾವು ಜಾಣರಾಗುವುದೂ ಮಾಸ್ತರರಿಗೆ ಕೀರ್ತಿತರುವುದೂ ಅಷ್ಟರಲ್ಲಿಯೇ ಅದೆ. ರೇವಣಸಿದ್ದಪ್ಪನವರು ಆ ಮಾಲಿಕೆಯೊಳಗಿನ ಮಣಿಗಳು ಅಲ್ಲವೇ ಅಲ್ಲ. ಬರಲಾರದ ವಿಷಯವನ್ನು ಗುರುಗಳಿಗೆ ಬೆನ್ನುಹತ್ತಿ ತಿಳಿಸಿಕೊಳ್ಳುವ ಲವಲವಿಕೆಯು ಅವರಲ್ಲಿತ್ತು. ತಿಳಿಸಿಕೊಂಡ ವಿಷಯವನ್ನು ಅವರು ಕಾಲಕಾಲಕ್ಕೆ ಮನನಮಾಡಿಕೊಳ್ಳುವರು. ಒಮ್ಮೆ, ತಿಂಗಳ ಹಿಂದೆ ತಿಳಿಸಿಕೊಟ್ಟ ಲೆಕ್ಕವನ್ನು ಮತ್ತೊಮ್ಮೆ ಮಾಡಬೇಕೆಂದು ಮಧ್ಯಾಹ್ನ ಶಾಲೆಗೆ ಹೋದಾಗ ಹಾಕಿದರು. ಬರಲಿಲ್ಲ--ಬರಲಿಲ್ಲ ಕಡೆಗೂ ಬರಲಿಲ್ಲ. ಸಂಜೆಯಾಯಿತು, ನಸುಕಾಯಿತು ಮುಚ್ಚುಗತ್ತಲೆಯಾಯಿತು ಬಗೆಹರಿಯಲೇ ಇಲ್ಲ. ಬಹಳ ಚಿಂತೆಯಾಯಿತು. ಹಾಗೆಯೇ ಘೋನಿಸುತ್ತ ಮನೆಗೆ ಹೊರಟರು. ಮನೆಯ ಕಡೆಗೆ ಕಾಲು ಕಿತ್ತಲೊಲ್ಲವು. ಶಾಲೆಯ ಮುಂದಿನ ಹನುಮಂತದೇವರ ಗುಡಿಯನ್ನು ಹೊಕ್ಕರು. ಅಲ್ಲಿಯೂ ಮತ್ತೆ ಲೆಕ್ಕ ಬಿಡಿಸಲಿಕ್ಕೆ ಮೊದಲು ಮಾಡಿದರು. ಲೆಕ್ಕವೇನು ಸೋಲಲಿಲ್ಲ. ಅವರು

ಕಡೆಗೆ ನಿರಾಶರಾಗಿ ಸಿಟ್ಟಿಗೆದ್ದು ಪಾಟಿಯನ್ನೆತ್ತಿ ಕಲ್ಲಿಗೆ ಅಪ್ಪಳಿಸುವಷ್ಟರಲ್ಲಿ ಲೆಕ್ಕದ ರೀತಿಯು ಮುಂಗಾರಿಯ ಮಿಂಚಿನಂತೆ ತಾನಾಗಿಯೇ ಹೊಳೆದು ಬಂದಿತು! ಇಂಥ ಪ್ರಸಂಗವು ಒಮ್ಮೆ ರಾಮತೀರ್ಥಸ್ವಾಮಿಗಳಿಗೂ ಬಂದಿತ್ತು. ಅವರು ಗಣಿತದ ಕಠಿಣವಾದ ನಾಲ್ಕು ಪ್ರಶ್ನೆಗಳನ್ನು ತೆಗೆದುಕೊಂಡು ಬೆಳಗಾಗುವದರೊಳಗೆ ಇವುಗಳನ್ನು ಬಿಡಿಸಬೇಕು ಇಲ್ಲವೆ ತಲೆಯನ್ನು ಕತ್ತರಿಸಿ ಕೊಳ್ಳಬೇಕೆಂದು ಒಂದು ಹರಿತವಾದ ಚೂರಿಯನ್ನು ಸುಗ್ಗುಲಲ್ಲಿ ಇಟ್ಟು ಕೊಂಡಿದ್ದರು. ನಡುರಾತ್ರಿಗೇ ಮೂರು ಪ್ರಶ್ನೆಗಳನ್ನು ಬಿಡಿಸಿದರು. ನಾಲ್ಕನೆ ಯದು ಮಾತ್ರ ನಸುಕು ಹರಿದರೂ ಬಗೆಹರಿಯಲೊಲ್ಲದು. ರಾಮತೀರ್ಥರು ಪ್ರತಿಜ್ಞೆಮಾಡಿದಂತೆ ಚೂರಿಯನ್ನೆತ್ತಿ ಗಂಟಲಿಗೆ ತಗುಲಿಸಿದರು. ಗಾಯವಾಗಿ ನೆತ್ತರು ಸುರಿಯತೊಡಗಿತು. ಚೂರಿಯನ್ನು ಇನ್ನಿಷ್ಟು ಒಳಕ್ಕೆ ಚುಚ್ಚಿಕೊಳ್ಳು ವಷ್ಟರಲ್ಲಿ ಗಣಿತ ಪ್ರಶ್ನೆಯು ಬಿಡಿಸಿದಂತೆ ನಿಚ್ಚಳವಾಗಿ ಮನಸ್ಸಿಗೆ ತೋರಿತು!

ರೇವಣಸಿದ್ದಪ್ಪನವರು ಆರನೇ ತರಗತಿಯಲ್ಲಿದ್ದಾಗ ಸಾಲೆಯ ಸಾಹೇಬರು ಒಂದು ಲೆಕ್ಕ ಹೇಳಿದ್ದರು. ಅವರೂ ಲೆಕ್ಕ ಮಾಡಿ ಪಾಟಿಯನ್ನು ಸಾಹೇಬರ ಕೈಯಲ್ಲಿ ಕೊಟ್ಟರು. ಸಾಹೇಬರು ಅದನ್ನು ನೋಡಿ 'ತಪ್ಪು' ಎಂದು ನುಡಿದು ಪಾಟಿಯನ್ನು ತಿರುಗಿಸಿದರು ರೇವಣಸಿದ್ದಪ್ಪನವರು ಹೆದರದೆ ಸಾಹೇಬರಿಗೆ "ತಪ್ಪಿಲ್ಲ. ಸರಿಯಿದೆ" ಎಂದು ನುಡಿದರು.

ಸಾ:— ಉತ್ತರ ತಪ್ಪಿದೆ. ಗಣಿತದಲ್ಲಿ ಹೀಗಿಲ್ಲ.

ರೇ:— ಗಣಿತದಲ್ಲಿಯೇ ಹೆಚ್ಚು ಕಡಿಮೆ ಆಗಿರಬಹುದು.

ಸಾ:— ಗಣಿತದಲ್ಲಿ ಅದು ಹೇಗೆ ತಪ್ಪುವದೋ? ನಡೆ–ಎಂದು ಬೆದರಿಸಿದರು.

ರೇವಣಸಿದ್ದಪ್ಪನವರು ಧೈರ್ಯದಿಂದಲೇ "ರೀತಿಯನ್ನಾದರೂ ನೋಡಿರಿ" ಎಂದು ಮೆತ್ತಗೆ ಮಾತಾಡಿದರು.

ಹೂವಿನಂಥ ಆ ನುಡಿಗಳು ಸಾಹೇಬರಿಗೆ ಬಿರುಸು ಬಾಣಗಳಂತೆ ಬಡಿದವು. ಸಿಟ್ಟು ತುಂಬಿತು. ಕಿಡಿಕಿಡಿಯಾದರು—"ಈ ಹುಡುಗನು ಬಹಳ ಕೆಟ್ಟವನಿರುವನು. ಯಾರಿಗೂ ಅಂಜುವಂತೆ ತೋರುವದಿಲ್ಲ" ಎಂದರು. ಇದನ್ನೆಲ್ಲ ನೋಡುತ್ತ ಅಲ್ಲಿಯೇ ಕುಳಿತಿದ್ದ ಶಾಲೆಯ ಪಂಚರಾದ ಶ್ರೀ ಬಸವನಗೌಡರೆಂಬವರು ಹುಡುಗನು ಒಳ್ಳೆಯವನೆಂದು ಹೇಳಿದರು. ಆತನ ಲೆಕ್ಕದ ರೀತಿಯನ್ನಾದರೂ ನೋಡಬೇಕೆಂದು ಬಿನ್ನವಿಸಿಕೊಂಡರು.

ಸಾಹೇಬರು ಆಗ ಲೆಕ್ಕದ ರೀತಿಯನ್ನು ನೋಡುವಷ್ಟರಲ್ಲಿ ಲೆಕ್ಕವೆಲ್ಲವೂ ಸರಿಯಾಗಿತ್ತು. ಮತ್ತಾರಾದರೂ ಆಗಿದ್ದರೆ ಮಿಸುಕದೆ ಇರುತ್ತಿದ್ದರು. ರೇವಣಸಿದ್ದಪ್ಪನವರು ಮುಗುದರಾಗಿದ್ದರೂ ಸತ್ಯವಾದದ್ದನ್ನು ಹೆದರದೆ ಮಾತಾಡಿದರು. ಲೋಕಮಾನ್ಯ ತಿಲಕರ ಪ್ರಸಂಗವೊಂದು ಕೇಳಿರಿ. ಅವರ ಮಾಸ್ತರರು ಸಾಲೆಗೆ ಬರುವುದರೊಳಗೆ ಹುಡುಗರು ಕಾಗದ ಹರಿದು ಶಾಲೆ ಯಲ್ಲೆಲ್ಲ ಚೆಲ್ಲಾಡಿಬಿಟ್ಟಿದ್ದರು. ಮಾಸ್ತರರು ಬಂದು ಸಿಟ್ಟು ಮಾಡಿ ಎಲ್ಲ ಹುಡುಗರೂ ಕಾಗದ ಚೂರುಗಳನ್ನಾಯ್ದು ಚೆಲ್ಲಲಿಕ್ಕೆ ಹೇಳಿದರು. ಹುಡುಗರು ಮರುಮಾತಾಡದೆ ಹಾಗೆ ಮಾಡಹತ್ತಿದರು. ತಿಲಕರು ಹಿಂಬದಿಗೆ ಕೈಹಚ್ಚಿ ಗೋಡೆಗೆ ಸುಮ್ಮನೆ ನಿಂತಿದ್ದರು. ಮಾಸ್ತರರು ಅವನನ್ನು ನೋಡಿ— "ನೀನೇಕೆ ನಿಂತೆಯೋ? ಕಾಗದ ಚೂರು ಆರಿಸು ಹೋಗು" ಎಂದು ಬೆದರಿಸಿದರು. ತಿಲಕರು ದಿಟ್ಟತನದಿಂದ "ನಾನು ಕಾಗದವನ್ನು ಹರಿದೇ ಇಲ್ಲ" ಎಂದು ಸ್ಪಷ್ಟವಾಗಿ ಹೇಳಿದರಂತೆ! ಸಾಮಾನ್ಯ ವಿದ್ಯಾರ್ಥಿಗಳಿಂದ ಇಂಥ ಧೈರ್ಯದ ಮಾತುಗಳು ಹೊರಡಬಹುದೇ? ಸಾಮಾನ್ಯರು ಪರಿಸ್ಥಿತಿಗೆ ಬಾಗುವರು. ಆದರೆ ಮಹಾತ್ಮರು ಪರಿಸ್ಥಿತಿಯನ್ನು ಬೊಗ್ಗಿಸುವರು.

ರೇವಣಸಿದ್ದಪ್ಪನವರು ಆರನೇ ತರಗತಿಯ ಪರೀಕ್ಷೆಯಾದ ಆರೇ ತಿಂಗಳಲ್ಲಿ ಕನ್ನಡ ಮುಲಕೀ ಪರೀಕ್ಷೆಗೆ ಕುಳಿತರು. ಅದರಲ್ಲಿ ತೇರ್ಗಡೆ ಯಾಗಿಯೇ ಬಿಟ್ಟರು. ಎರಡನೇ ನಂಬರನ್ನು ಪಡೆದರು. ಆದರೆ ಮೊದ ಲನೇ ನಂಬರು ಬರಲಿಲ್ಲವೆಂದು ಅವರಿಗೆ ಬಹಳ ಹಳಹಳಿಯಾಯಿತು. ಶಾಲೆಯಲ್ಲಿ ಯಾವಾಗಲೂ ಮೊದಲನೆ ನಂಬರಲ್ಲಿಯೇ ಇದ್ದವರು. ಅವರಿಗೆ ಏಕೆ ಹಳಹಳಿಯಾಗಲಿಕ್ಕಿಲ್ಲ? ಏಳೆಂಟು ವರುಷ ಪರೀಕ್ಷೆಗೆ ಎಡತಾಕಿ ಇನ್ನೂರೋ ಮುನ್ನೂರೋ ನಂಬರು ಬಂದರೆ, ಹಿಗ್ಗಿ ಹೀರೀ ಕಾಯಿಯಾಗಿ ಊರಲ್ಲಿ ಸಕ್ಕರೆ ಹಂಚುತ್ತ ಬರುವ ವಿದ್ಯಾರ್ಥಿಗಳ ವಿಚಾರವೆಲ್ಲಿ? ನಮ್ಮ ರೇವಣಸಿದ್ದಪ್ಪನವರ ವಿಚಾರವೆಲ್ಲಿ? ಆ ಹಳಹಳಿಯಲ್ಲಿ ನವೆಯದೆ 'ಟ್ರೇನಿಂಗ್ ಕಾಲೇಜಿನಲ್ಲಾದರೂ ಮೊದಲನೇ ನಂಬರು ತರುವೆನು' ಎಂದು ಗಟ್ಟಿಮಾಡಿಕೊಂಡರು.

೧೯೦೬ರಲ್ಲಿ ಮುಲಕೀ ಪರೀಕ್ಷೆಗೆ ತೇರ್ಗಡೆಯಾಗಿ ೧೯೦೭ರಲ್ಲಿ ಧಾರ ವಾಡದ ಟ್ರೇನಿಂಗ ಕಾಲೇಜನ್ನು ಸೇರಿದರು. ಅಲ್ಲಿಯ ಅಭ್ಯಾಸಕ್ರಮ ವನ್ನು ಸರಿಯಾಗಿ ಸಾಗಿಸುತ್ತ ಪ್ರತಿ ವರುಷ ಮೊದಲನೇ ನಂಬರಿನಲ್ಲಿಯೇ

ತೇರ್ಗಡೆ ಹೊಂದಿದರು. ನಾಲ್ಕೂ ಜಿಲ್ಹೆಗಳ ಹುಡುಗರಲ್ಲಿ ಇವರೇ ಮೊದಲಿಗರು. ಅಲ್ಲಿ ಮೂರು ವರುಷ ಓದಿ ಗಣಿತದಲ್ಲಿಯೂ ಸಂಸ್ಕೃತದಲ್ಲಿಯೂ ತಕ್ಕಷ್ಟು ಜ್ಞಾನವನ್ನು ಸಂಪಾದಿಸಿದರು. ಕೊನೆಯ ಪರೀಕ್ಷೆಯಲ್ಲಿ ಮೊದಲನೇ ನಂಬರು ಬಂದದ್ದರಿಂದ ಮೂವತ್ತು ರೂಪಾಯಿಗಳ ಬಹುಮಾನ ಸಿಕ್ಕಿತು.* ಅಲ್ಲಿಂದ ಹೊರಬಿದ್ದವರು ಉಕ್ಕಲಿ (ತಾ. ಬಾಗೇವಾಡಿ) ಎಂಬ ಗ್ರಾಮಕ್ಕೆ ಉಪಶಿಕ್ಷಕರಾಗಿ ೧೯೦೯ರಲ್ಲಿ ಬಂದರು.

ಶಿಕ್ಷಕರಾಗಿ ಬಂದರೂ ಇವರು ಕಲಿಯುವ ಹವ್ಯಾಸವು ಹೋಗಿದ್ದಿಲ್ಲ. ಒಂದು ವರ್ಷ ಸ್ವತಂತ್ರವಾಗಿ ಓದಿ ಇಂಗ್ಲೀಷಿನ ಮೂರು ಪುಸ್ತಕಗಳನ್ನು ಕಲಿತರು. ಶಿಕ್ಷಕರಾಗುವುದು ಒತ್ತಟ್ಟಿಗಿರಲಿ ಒಂದು ಸೊಟ್ಟ ಮುಲಕೀ ಪರೀಕ್ಷೆ ಪಾಸಾದರೆ ಇಂದ್ರ ಪದವಿಯೋ ಚಂದ್ರ ಪದವಿಯೋ ಸಿಕ್ಕಂತಾಗಿ ಬ್ರಹ್ಮನಿಗಪ್ಪನಾಗಿ ಸರಸ್ವತಿ ಸೊಸೆಯಂತ ತಿಳಿದುಕೊಳ್ಳುವ ವಿದ್ಯಾವಂತರು ಬೇಕಾದಷ್ಟು ಸಿಗುವದಿಲ್ಲವೇ? ರೇವಣಸಿದ್ದಪ್ಪನವರಾದರೂ ತಾವೇ ಓದಿಕೊಳ್ಳಲಿಕ್ಕೆ ಪ್ರಾರಂಭಿಸಿದ್ದರು: ಅವರ ತಾಯಿ ಲಕ್ಷ್ಮವ್ವನವರು ಅಕಸ್ಮಾತ್ತಾಗಿ ತೀರಿಕೊಂಡರು; ಅದೇ ಸಮಯಕ್ಕೆ ಸೋದರಮಾವನು ಸ್ವರ್ಗಸ್ಥನಾದನು. ಅದರಿಂದ ರೇವಣಸಿದ್ದಪ್ಪನವರು ಇದು ನಿಜವಾದ ವಿದ್ಯೆಯಲ್ಲವೆಂದೂ ಆಧ್ಯಾತ್ಮವಿದ್ಯೆಯೇ ವಿದ್ಯೆಯೆಂದೂ ಭಾವಿಸಿಕೊಂಡು, ನಿಜವಾದ ವಿದ್ಯೆಯನ್ನು ಸಂಪಾದಿಸುವದರಲ್ಲಿ ತೊಡಗಿದರು. ಆದರೆ ಮಾಸ್ತರಿಕೆಯನ್ನು ಮಾತ್ರ ಬಿಡಲಿಲ್ಲ.

ಇವರು ಶಾಲೆಯಲ್ಲಿದ್ದಾಗ ಸಹಪಾಠಿಗಳೊಡನೆ ಸತ್ಯತನದಿಂದಲೂ ಪ್ರೀತಿಯಿಂದಲೂ ನಡಕೊಳ್ಳುತ್ತಿದ್ದರು. ಯಾರ ಗೊಡವೆಗೂ ಹೊಗುತ್ತಿದ್ದಿಲ್ಲವಾದರೂ ವಿದ್ಯಾರ್ಥಿಗಳ ಗೋಮವು ಇವರಿಗೂ ಇತ್ತು; ಗೋವೆಂದರೆ ಮತ್ತೇನಾದರೂ ತಿಳಕೊಂಡೀರಿ; ಶರೀರ ದುರ್ಬಲತೆ. ಆದರೆ ಕಾಲೇಜಿಗೆ ಹೋದಂದಿನಿಂದ ಶರೀರವನ್ನು ಸುಧಾರಿಸಿಕೊಳ್ಳುತ್ತ ಬಂದರು.

---

* 'ವಿದ್ಯಾವರ್ಧಕ ಸಂಘ' (ಧಾರವಾಡ) ದವರ ವರ್ಷಪ್ರಾಯಿಜ ಪರೀಕ್ಷೆಗೆ ಕುಳಿತು ಇಪ್ಪತ್ತೈದು ರೂಪಾಯಿ ಬಹುಮಾನವನ್ನೂ ಪಡೆದರು.

# ೩. ಶಿಕ್ಷಕತನವೂ ಸಂಸಾರವೂ

**"ಜ್ಞಾನವಿಲ್ಲದೆ ಭೋಗಿಸುವ ಭೋಗಿ ಭವರೋಗಿ। ಜ್ಞಾನವಿಡಿದ ಭೋಗಿ ಯೋಗಿ"**

**—ಭರತೇಶವೈಭವ**

ಧಾರವಾಡದ ಕಾಲೇಜದಿಂದ ಹೊರಬಿದ್ದವರು ತಮ್ಮೂರಾದ ಮುಸಗೂಳಿಯ ಸಮೀಪಕ್ಕೆ ಉಕ್ಕಲಿ ಎಂಬ ಹಳ್ಳಿಗೆ ೧೯೨೯ರಲ್ಲಿ ಮೊದಲನೆಯ ಅಸಿಸ್ಟಂಟರಾಗಿ ಬಂದರಷ್ಟೇ? ೧೯೨೯ನೇ ಡಿಶೆಂಬರವೇ ಇವರ ಉದ್ಯೋಗಕ್ಕೆ ಆರಂಭ. ಮೇಲಿನ ವರ್ಗಗಳನ್ನು ತೆಗೆದುಕೊಂಡು ನಾಲ್ಕೈದು ಹುಡುಗರನ್ನು ಮುಲಕೀ ಪರೀಕ್ಷೆಯಲ್ಲಿ ತೇರ್ಗಡೆ ಮಾಡಿದರು. ಆದೇ ಇಪ್ಪತ್ತೊಂದನೇ ವಯಸ್ಸಿನ ತಾರುಣ್ಯ; ಕಾಲೇಜದಿಂದ ಹೊರಬಿದ್ದ ಹೊಸ ತಲೆ; ಕೇಳುವದೇನು? ಒಂದುವರಿ ವರ್ಷದಲ್ಲಿಯೇ ಹತ್ತರಕಿಗೆ† ಮುಖ್ಯಾಧ್ಯಾಪಕರೆಂದು ವರ್ಗವಾಗಿ ಸಾಯುವ ತನಕ ಅಲ್ಲಿಯೇ ಇದ್ದರು. ಅಲ್ಪಾವಧಿಯಲ್ಲಿಯೇ ಹೆಡ್ ಮಾಸ್ತರರಾದದ್ದು ಕಾರ್ಯತತ್ಪರತೆಯಿಂದಲೇ ಮೂರನೆ ವರುಷ ಟ್ರೇಂಡರಿದ್ದವರು ಹೆಡ್ ಮಾಸ್ತರರಾದರು ನಿಜ! ಆದರೆ ಎಷ್ಟು ಜನ ಮಾಸ್ತರರು ಮೂರನೇ ವರುಷದವರಿಲ್ಲ? ಅವರೆಲ್ಲರಿಗೂ ಈ ಸ್ಥಿತಿಯು ಏಕೆ ಬರಬಾರದು? ಮಾಸ್ತರರಿಗೆ ಕಾರ್ಯತತ್ಪರತೆ ಬೇಕು; ವಿಷಯ ಸಂಗ್ರಹ ಬೇಕು; ಕಲಿಸುವ ಸುಲಭ ಪದ್ಧತಿ ಬೇಕು. ಈ ಮೂರು ಮಾತುಗಳು ಕ್ರಮವಾಗಿಯೇ ಅವೆ. "ಆಚಾರ್ಯನಾಗಬೇಕೆನ್ನುವವನು ನಾನಾ ವಿಷಯಗಳನ್ನು ತಿಳಿಯುವದು ಆವಶ್ಯಕ. ತನ್ನನ್ನು ಕೊಂದುಕೊಳ್ಳುವುದಕ್ಕೆ ಒಂದು ಸಣ್ಣ ಸೂಜಿಯೇ ಸಾಕು. ಇನ್ನೊಬ್ಬರನ್ನು ವಧಿಸಬೇಕಾದರೆ ಕತ್ತಿ ಗುರಾಣಿಗಳು ಬೇಕು" ಎಂದು ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಾರೆ. ಸಾಲೆಯ ಪುಸ್ತಕಗಳನ್ನಲ್ಲದೆ ಉಳಿದ ಹೊತ್ತಿಗೆಗಳನ್ನು ಮುಟ್ಟದಿರುವ ಶಿಕ್ಷಕನು ವಿಷಯಸಂಗ್ರಹವನ್ನು ಅದೆಷ್ಟು ಮಾಡಿಕೊಂಡಾನು ಯಾರು ಹೇಳಬೇಕು? ಮಾಸ್ತರಿಕೆಯು ಹೊಟ್ಟೆಗಾಗಿ ಮಾಡುವ ಉದ್ದಿಮೆಯಲ್ಲ. ಅಥವಾ ಅದನ್ನೇ ಮುಖ್ಯವಾಗಿಟ್ಟುಕೊಳ್ಳುವುದಲ್ಲ. ಅದೊಂದು ದೇಶಸೇವೆ, ಜನಸೇವೆ. ಉದ್ಯೋಗವಿಲ್ಲದೆ ತಿರುಗಿ ತಿರುಗಿ

---

† ಹತ್ತರಕಿಗೆ ಅಥರ್ಗಾ ಎನ್ನುವರು. ಇದು ಇಂಡಿ ತಾಲೂಕಿನಲ್ಲಿದೆ.

ಕೊನೆಯಲ್ಲಿ ಮಾಸ್ತರಿಕೆಯನ್ನಾದರೂ ಮಾಡೋಣವೆಂದು ನೌಕರಿ ಹಿಡಿದರೂ ಹಿಡಿಯಲಿ, ಆ ಮೇಲಾದರೂ ಅದೊಂದು ದೇಶಸೇವೆಯೆಂಬ ಭಾವನೆಯನ್ನು ಇಟ್ಟುಕೊಳ್ಳಲಿ. ಮಾಸ್ತರಿಕೆಯನ್ನು ದೇಶಸೇವೆಯೆಂದು ಮಾಡಲಿಕ್ಕೆ ನಾವೇನು ದೇಶಭಕ್ತರೇ ಅನ್ನುವವರು ಮ. ಗಾಂಧಿಯವರೆನ್ನುವ "ತಮ್ಮ ಕರ್ತವ್ಯವನ್ನು ಯೋಗ್ಯವಾದ ರೀತಿಯಲ್ಲಿ ಮಾಡುವುದೇ ದೇಶಸೇವೆ"ಯೆಂಬ ಮಾತನ್ನು ಮನನ ಮಾಡಲಿ. ಕೆಲವರು ಅನುಕೂಲ ಪರಿಸ್ಥಿತಿಯಿಲ್ಲವೆಂದು ಹಾಡುವರು ಅಂಥ ಪರಿಸ್ಥಿತಿಯಿದ್ದರೆ ಹೀಗೆ ಮಾಡು ಎಂದು ಹೇಳಲಿಕ್ಕೆ ಕಾರಣವೇ ಇಲ್ಲ. ಅನುಕೂಲ ಪರಿಸ್ಥಿತಿಯನ್ನು ಉಂಟುಮಾಡಿಕೊಳ್ಳಲಿಕ್ಕೆ ಬೇಕಾಗುತ್ತದೆ. "ತಾನು ಒಳ್ಳೆಯವನಾದರೆ ತನಗೂ ಒಳ್ಳೆಯವರಾಗಿರ್ಪರು. ತಾ ಹೀನನಾದರೆ ತನಗೆ ಸರ್ವರೂ ಹೀನರಾಗಿರ್ಪರು. ತಾನು ಒಳ್ಳೆಯವನಾಗಿ ತನಗೆ ಸರ್ವರೂ ಹೀನರಾದರೆ ಅದು ತನ್ನ ಪೂರ್ವದ ಕರ್ಮ. ತಾ ಹೀನನಾಗಿ ಸರ್ವರೂ ಒಳ್ಳೆಯವರಾದರೆ ಅದು ತನ್ನ ದೈವದ ಬಲವು ನೋಡಾ ಅಖಂಡೇಶ್ವರಾ" ಇರುವೆಯಾಗಿ ಸಕ್ಕರೆ ಮೇದಂತೆ ಅನುಕೂಲವಾದ ಪರಿಸ್ಥಿತಿಯನ್ನು ಒಮ್ಮೆಲೇ ಉಂಟು ಮಾಡಿಕೊಳ್ಳಬಹುದು. ಒಮ್ಮೆಲೆ ಆಡಂಬರವನ್ನು ಇಳಿಸಿದರೆ ನಿಜವಾದ ಒಳ್ಳೆಯವರಿಗೆ ದುಸ್ಥಿತಿಯೇ ಉಂಟಾಗಬಹುದು. 'ಒಳ್ಳೆಯವರ ದಿನಮಾನಗಳಿವಲ್ಲ' ಎಂದು ಪರಿತಾಪ ಪಡುವುದನ್ನು ಕೇಳಿಲ್ಲವೆ?

ಹಾದಿಗೆ ಹೋಗುವುದನ್ನು ಮೊಳಹಾಕದೆ ಇದ್ದಷ್ಟನ್ನೇ ಮಾಡುತ್ತ ಕುಳಿತರಾಯಿತು. ಹುಡುಗರ ಸಂಖ್ಯೆಯನ್ನು ಬೆಳೆಸಿ ಹಗಲು ರಾತ್ರಿ ಬಡಕೊಂಡು ಕಲಿಸಿದರೆ ಆಗುವದೇನು? ಅದು ಕಡೆ ಪೂರಯಿಸುವದಿಲ್ಲ. ಅಷ್ಟು ಮಾಡದರೆ ಬರುವ ಗಳಿಕೆಯಾದರೂ ಏನು? 'ಊರ ಉಪಕಾರ ಮರಿಯದು, ಹೆಣ ಸಿಂಗಾರ ಸರಿಯದು" ಎಂಬ ವಿಚಾರಸರಣಿಯವರೂ ಶಿಕ್ಷಕರಲ್ಲಿರುತ್ತಾರೆ. ಶರೀರಾರೋಗ್ಯಕ್ಕೆ ಬಾಧೆ ಬರದಂತೆ ಎಚ್ಚರಪಡಬೇಕೆನ್ನುವುದು ಸರಿಯಾಗಿದೆ. ಆದರೆ ತನ್ನ ದೇಶಬಂಧುಗಳು ನಿರಕ್ಷರಕುಕ್ಷಿಗಳಾಗಿ ಅಜ್ಞಾನದಲ್ಲಿ ಮುಳುಗಿರಲು ನಿಶ್ಚಿಂತೆಯಿಂದಿರುವದು ಸರಿಯಲ್ಲ. ಸಂಬಳ ಸಾಲದು ಮೊದಲಾದ ಆಕ್ಷೇಪಗಳು ಇಲ್ಲಿ ಕಾರಣವಾಗಲಾರವು. ಹೊಟ್ಟೆ ತಣ್ಣಗಿದ್ದರೇ ಎಲ್ಲಾ ಕೆಲಸಗಳು ಕೈಗೂಡುವವೆನ್ನುವುದೂ ಸುಳ್ಳಲ್ಲ. ತಣ್ಣಗಿಲ್ಲದ ಹೊಟ್ಟೆಯವರು ಆ ಕೆಲಸವನ್ನು ಬಿಟ್ಟು ಮತ್ತೇನಾದರೂ

ಮಾಡಿಯಾರು. ಹೊಟ್ಟೆ ಉರಿಯಹತ್ತಿದರೆ ಅರಸೊತ್ತಿಗೆಯನ್ನಾದರೂ ಬಿಟ್ಟು ಕೊಡಬೇಕಾಗುವದು. ಇರಲಿ. ನಮ್ಮ ರೇವಣಸಿದ್ಧಪ್ಪ ಮಾಸ್ತರರು ಹತ್ತರಕಿಗೆ ಹೆಡ್ ಮಾಸ್ತರರಾಗಿ ಹೋದರಷ್ಟೇ ? ಅಲ್ಲಿ ಅವರ ಪ್ರಯತ್ನ ದಿಂದ ಒಂದು ಅಸಿಸ್ಟಂಟ ಸ್ಥಳವೂ ಒಂದು ಹೆಣ್ಣು ಮಕ್ಕಳ ಶಾಲೆಯೂ ಹೊಸತಾಗಿ ಆದವು. ಸಾಲೆ ಬಿಟ್ಟವರು ಮಧ್ಯಾಹ್ನದಲ್ಲಿಯೂ ರಾತ್ರಿ ಯಲ್ಲಿಯೂ ಬಂದು ಓದುಬರಹವನ್ನು ಕಲಿಯಹತ್ತಿದರು. ಪರ ಊರಿಂದ ಹುಡುಗರು ಬಂದು ಮುಲಕೀ ಪರೀಕ್ಷೆಯ ಅಭ್ಯಾಸ ಮಾಡಹತ್ತಿದರು. ಇವರಿಗೆ ಶಿಕ್ಷಣಕಾರ್ಯದಲ್ಲಿ ವಿಶ್ರಾಂತಿಯೇ ಇರುತ್ತಿರಲಿಲ್ಲ. ರಾತ್ರಿಯಲ್ಲಿ ಹುಡುಗರಿಗೆ ಅಭ್ಯಾಸ ಹೇಳುವಾಗ ಹುಡುಗರಿಗೆ ನಿದ್ದೆ ಬಂದು ಮಲಗಿದರೇ ಅಭ್ಯಾಸವು ಮುಗಿಯುವದು. ಹುಡುಗರಿಗಿಂತ ಮೊದಲು ಎಂದೂ ಮಲ ಗುವರಲ್ಲ. ಅಲ್ಲದೆ ಸ್ವಲ್ಪದರಲ್ಲಿ ಅನೇಕ ವಿಷಯಗಳನ್ನು ಮನದಲ್ಲಿ ನೆಡು ವಂತೆ ಹೇಳುವುದೂ ಅನೇಕ ಪುಸ್ತಕಗಳನ್ನೋದಿ ವಿಷಯಸಂಗ್ರಹವನ್ನು ಮಾಡಿಕೊಳ್ಳುವುದೂ ಅವರ ವಾಡಿಕೆಯಾಗಿತ್ತು ಅವರಿಗೆ ತಮ್ಮ ಕಾರ್ಯ ತತ್ಪರತೆಯು ಅಷ್ಟೊಂದು ಮಿಗಿಲೆನಿಸಿತ್ತು! ''ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು. ಲಿಂಗಪೂಜಯನಾದರೂ ತೊರೆಯ ಬೇಕು. ಕಾಯಕವೇ ಕೈಲಾಸವಾದ ಕಾರಣ'' (ಅಮುಗೇಶ್ವರ ಲಿಂಗ)

ಅಷ್ಟು ಜನ ವಿದ್ಯಾರ್ಥಿಗಳು ಸುಶಿಕ್ಷಿತರಾದರೂ ಪ್ರತಿಫಲಾಪೇಕ್ಷೆ ಯಿಲ್ಲದೆ ದುಡಿಯುತ್ತಲೇ ಬಂದರು. ಅವರ ಸ್ವಭಾವವು ಭಗವದ್ಗೀತೆಯೊಳಗೆ ವರ್ಣಿತವಾದ ನುಡಿಯನ್ನು ಹೋಲುವಂತೆ ತೋರುತ್ತದೆ. ''ಎಲ್ಲ ವ್ಯಾಪಾರ ವನ್ನು ತನ್ನ ಧರ್ಮಕ್ಕನುಸರಿಸಿ ಮಾಡಿ ಫಲಾಶೆ ಬಿಟ್ಟು ಅದೆಲ್ಲವನ್ನು ಕೃಷ್ಣಾ ರ್ಪಣ ಬುದ್ಧಿಯಿಂದಾಚರಿಸಬೇಕು." ರೇವಣ ಸಿದ್ಧಪ್ಪನವರು ಅದೆಷ್ಟೋ ಹುಡುಗರಿಗೆ ವಾರದ ಮನೆ ಕೊಟ್ಟು ಕಲಿಸಿದರು. ಬಡ ವಿದ್ಯಾರ್ಥಿಗಳು ಮುಲಕೀ ಪರೀಕ್ಷೆಗೆ ಹೋಗಲಿಕ್ಕೆ ಕೈಯಲ್ಲಿ ಕಾಸಿಲ್ಲದೆ ಅಲೆಯುತ್ತಿರುವಾಗ ಕೈಯಿಂದ ರೂಪಾಯಿ ಕೊಟ್ಟು ಕಳಿಸಿದರು. ಒಮ್ಮೆ ಒಬ್ಬ ವಿದ್ಯಾರ್ಥಿಯು ಗುರುಭಕ್ತಿಯಿಂದ ಉಡುಗೊರೆ ತಂದಿರಲು ಮಾಸ್ತರರು ಅದನ್ನು ಸ್ವೀಕರಿಸ ಲಿಕ್ಕೆ ಒಪ್ಪಲೇ ಇಲ್ಲ. ನಮ್ಮ ಕೈಯಲ್ಲಿ ಇಂತಿಷ್ಟು ಹುಡುಗರು ಮುಲಕೀ ಪರೀಕ್ಷೆ ಪಾಸಾದರೆಂದು ಹೆಮ್ಮೆ ಕೂಡ ಇರಲಿಲ್ಲ. ಬಡವರ ಮಕ್ಕಳನ್ನು ಮುಲಕೀ ಪರೀಕ್ಷೆ ಮಾಡಿಸಿದರೆ ಇಲ್ಲವೆ ಸುಶಿಕ್ಷಿತರನ್ನಾಗಿ ಮಾಡಿದರೆ ಅವರ

ತಾಯಿ ತಂದೆಗಳಿಗೆ ನಿರುಪಯುಕ್ತ ಪ್ರಾಣಿಯೊಂದನ್ನು ನಿರ್ಮಿಸಿ ಕೊಟ್ಟಂತೆಯೇ ಒಮ್ಮೊಮ್ಮೆ ಆಗಬಹುದು. ಮಧ್ಯಾಹ್ನ ಕೂಲಿ ಮಾಡಿ ಮಕ್ಕಳನ್ನು ಸಲುಹಿ ಸಾಲೆ ಕಲಿಸಿ ಏನೋ ಒಂದು ಮಹತ್ವಾಕಾಂಕ್ಷೆಯನ್ನು ಇಟ್ಟು ಕೊಂಡು ಕುಳಿತ ತಾಯಿ ತಂದೆಗಳಿಗೆ ಭರವಸೆಯು ಎಮ್ಮೆ ಕೋಣ ಈದಂತೆ ಮಕ್ಕಳ ಪಾಡಾದರೆ ಗತಿಯೇನು? ನೌಕರಿ ಸಿಗುವದಿಲ್ಲ, ದುಡಿಯುವ ಮನಸ್ಸಿಲ್ಲ, ಶಕ್ತಿಯಿಲ್ಲ. ನಾಚಿಕೆ ಬೇರೆ. ಇಂಥ ಮಕ್ಕಳು ಸುಶಿಕ್ಷಿತರಾದರೆ ಕೂಳಿಗೆ ಕಾಳ-ಭೂಮಿಗೆ ಭಾರ. ಅಶಿಕ್ಷಿತ ಮಕ್ಕಳಿಂದ ಅದೆಷ್ಟೋ ಪ್ರಯೋಜನವನ್ನು ತಾಯಿ ತಂದೆಗಳು ಹೊಂದುತ್ತಿರುವಾಗ ಸುಶಿಕ್ಷಿತರು ಭಾರವಾಗುವದೆಂದರೆ ಶಿಕ್ಷಣಕ್ಕೆ ಎಷ್ಟು ದೋಷ ಕೊಡಬೇಕು! ಬಡವ ತಾಯಿ ತಂದೆಗಳ ಬಡತನದ ಕಳೆಯನ್ನು ನೋಡಿದರೆ ಎದೆ ಕರಗುವದಿಲ್ಲವೆ? ನಿರುದ್ಯೋಗಿಗಳಾದ ಸುಶಿಕ್ಷಿತ ತರುಣರ ಮುಖವನ್ನು ನೋಡಿದರೆ ಎದೆ ಕರಗುವದಿಲ್ಲವೆ? ಅಗುತ್ತಿದ್ದರೆ ನೂರಾರು ವಿದ್ಯಾರ್ಥಿಗಳನ್ನು ಸುಶಿಕ್ಷಿತರನ್ನಾಗಿ ಮಾಡಿದರೇನು? ಹೆಡ್ ಮಾಸ್ತರರಾದರೇನು ತಾಲೂಕ ಶಾಲೆಯ ಮಾಸ್ತರರಾದರೇನು? ಏನಾದರೂ ಏನು? "ಅನಿಯಂತ್ರಿತ ಸತ್ತೆಯ ಕೆಳಗೆ ಶಿಕ್ಷಣ ಸಾಗುತ್ತಿರುವದರಿಂದ ಅನಿಯಂತ್ರಿತ ಸರಕಾರದ ಕೆಳಗಿನ ಪ್ರಜೆಯಾಗುವುದಕ್ಕೆ ಮಾತ್ರ ಅವನು ಯೋಗ್ಯನಾಗುತ್ತಾನೆ. ನಮ್ಮಲ್ಲಿಯ ಸಾರ್ವಜನಿಕರು ಕೂಡ ಅನಿಯಂತ್ರಿತ ಪದ್ಧತಿಯ ಶಿಕ್ಷಣ ಪದ್ಧತಿಯಿಂದಲೇ ಸುಶಿಕ್ಷಿತರಾಗಿರಾಗಿ ಅನಿಯಂತ್ರಿತ ಪರಿಸ್ಥಿತಿಯಲ್ಲಿ ಬೆಳೆದಿರುವದರಿಂದ ರಾಷ್ಟ್ರೀಯ ಸುಧಾರಣೆಗೆ ಅವರಿಂದ ಹೆಚ್ಚು ಹೆಚ್ಚು ಆತಂಕವೇ ಉಂಟಾಗುತ್ತದೆಂಬುದು ಆಶ್ಚರ್ಯವಲ್ಲ" ಎಂದು ಸ್ಪೆನ್ಸರ ಸಾಹೇಬರು ಹೇಳುವರು. ಶಿಕ್ಷಣದಲ್ಲಿ ದೋಷವಿದ್ದಿರಬೇಕು. ದೋಷವಿದ್ದರೆ ಮಾಸ್ತರರು ಮಾಡುವುದೇನು? ರಾಜಸತ್ತೆಯಿಲ್ಲದೆ ಅದನ್ನು ಬದಲಿಸಬಹುದೇ? ಈ ಪದ್ಧತಿಯನ್ನು ಪ್ರಾರಂಭಿಸುವಾಗ ಇದೇ ಉಪಯುಕ್ತವಾದ ಶಿಕ್ಷಣವಾಗಿದ್ದಿತು. ದೊಡ್ಡಿನಂಥ ರಾಜ್ಯದ ಸೂತ್ರಗಳನ್ನು ಹಿಡಿಯಲಿಕ್ಕೆ ಅನೇಕ ನೌಕರರನ್ನು ಉಂಟು ಮಾಡುವುದು ಆಗ ಶ್ರೇಯಸ್ಕರವೇ ಆಗಿತ್ತು. ಸರಕಾರದವರ ತೂಕದಂತೆ ನೌಕರರು ಸಾಕಾಗುವಷ್ಟು ಹೊರಬಿದ್ದರು. ಅವರಿಂದಲೇ ಕಲಿತವರಿಗೆ ಈಗ ನೌಕರಿ ಇಲ್ಲವಾಗಿವೆ. ನೂರಕ್ಕೆ ಹತ್ತೋ ಹನ್ನೆರಡೋ ಸುಶಿಕ್ಷಿತರು ನಮ್ಮ ದೇಶದಲ್ಲಿದ್ದಾರೆ. ಇಷ್ಟೇ ಜನರಲ್ಲಿ ವಕೀಲರಾಗಿಯೂ

ನೌಕರರಾಗಿಯೂ ಸಿರುದ್ಯೋಗಿಗಳಾಗಿಯೂ ದೇಶವನ್ನೇ ಅರೆಯುತ್ತಿರಲು ಹೆಚ್ಚು ಜನರು ಕಲಿತಂತೆ ಹಾಹಾಕಾರವೇ ಹೆಚ್ಚಾಗಬಹುದು. ಅಷ್ಟರಲ್ಲಿ ಈ ಶಿಕ್ಷಣವು ತಲೆಚಿಟ್ಟು ಹಿಡಿದು ಬದಲಾವಣೆ ಮಾಡುವ ಹೊತ್ತಾ ಬಂದೀತು. ಬಂದಿದೆ. ಯಾವ ದೇಶದ ಶಿಕ್ಷಣ ಪದ್ಧತಿಯಾದರೂ ಬದಲಾಗುತ್ತಲೇ ಬಂದಿದೆಯಾದ್ದರಿಂದ "ಇಂಥ ಶಿಕ್ಷಣವೇ ಬೇಕು" ಎಂದು ಹೇಳುವದಕ್ಕಾಗುವದಿಲ್ಲ. ಪೂರ್ಣ ನಿರ್ದೋಷಿಯಾದ ಶಿಕ್ಷಣವೇ ಇಲ್ಲವೆನ್ನಬಹುದು. ಇರಲಿ.

"ಸಂಸಾರದಲ್ಲಿ ತನ್ನ ಉದ್ಯೋಗವನ್ನು ಸುರಕ್ಷಿತವಾಗಿ ಸಾಗಿಸುವುದಕ್ಕೆ ಸಮರ್ಥನನ್ನಾಗಿ ಮಾಡುವ ಅಂದರೆ ಚೆನ್ನಾಗಿ ಮಾರ್ಗ ತೋರಿಸಿಕೊಟ್ಟರೆ ತನ್ನ ಹೊಟ್ಟೆಯನ್ನು ತಾನು ಹೊರಕೊಳ್ಳುವುದಕ್ಕೆ ಸಮರ್ಥನನ್ನಾಗಿ ಮಾಡುವ ನಾಗರಿಕರನ್ನು ಹೆಚ್ಚಿಸುವುದೇ ಶಿಕ್ಷಣದ ಮೂಲೋದ್ದೇಶ."- (ಸ್ಪೇನ್ಸರ)

ಯಾವ ವಿದ್ಯೆಯ ಅಭಿವೃದ್ಧಿಯಿಂದ ಇತರ ಸಾಧಾರಣರನ್ನು ಜೀವನ ಸಂಗ್ರಾಮದಲ್ಲಿ ಸಮರ್ಥರನ್ನಾಗಿ ಮಾಡುವುದಕ್ಕಾಗುವುದಿಲ್ಲವೋ ಯಾವುದು ಮನುಷ್ಯನಿಗೆ ಚಾರಿತ್ರ ಬಲ, ಪರಸೇವಾತತ್ಪರತೆ, ಇವುಗಳನ್ನು ಬರಗೊಡಿಸುವದಿಲ್ಲವೋ ಅದು ವಿದ್ಯೆಯೇನು? ಯಾವ ವಿದ್ಯೆಯಿಂದ ಜೀವನದಲ್ಲಿ ತನ್ನ ಕಾಲಿನ ಮೇಲೆ ತಾನು ನಿಂತುಕೊಳ್ಳಬಹುದೋ ಅದೇ ವಿದ್ಯೆ."

—( ವಿವೇಕಾನಂದ )

ಇಬ್ಬರ ವಿಚಾರಗಳನ್ನು ಒಂದೇ ಮಾತಿನಲ್ಲಿ ಹೇಳಬೇಕಾದರೆ ಸ್ವಾತಂತ್ರ್ಯ, ಸ್ವಾವಲಂಬನ, ಪರೋಪಕಾರ ಇವು ಮೊದಲಾಗಿ ದಿವ್ಯ ಗುಣಗಳು ಶಿಕ್ಷಣದಿಂದ ಉಂಟಾಗಬೇಕು. ನಮ್ಮ ರೇವಣಸಿದ್ದಪ್ಪನವರು ಇದ್ದುದನ್ನೇ ಕಲಿಸಿದರು. ಅವರ ಶಿಷ್ಯರು ನೌಕರರೇ ಆಗಿರುವರು. ಆದರೂ ಶುದ್ಧ ಹೇತುವಿನಿಂದ ಮಾಡಿದ ಅವರ ಕಾರ್ಯವು ಶ್ಲಾಘನೀಯವಾಗಿದೆ. 'ಸಾಧಾರಣರೂ ಸುಶಿಕ್ಷಿತರಾಗಲಿ, ಬಟ್ಟೊತ್ತುವವರ ಸಂಖ್ಯೆಯು ಕಡಿಮೆಯಾಗಲಿ ಇದೂ ಹಿತಕಾರಿಯೇ.' ನೌಕರಿ ಸಿಗುವದಿಲ್ಲೆಂದು ಗೊತ್ತಾಗಿದ್ದರೂ, ಈ ಶಿಕ್ಷಣವು ದೋಷಯುಕ್ತವೆಂದು ಅನಿಸಿದರೂ ಕಲಿಯುವವರ ಸಂಖ್ಯೆ ಬೆಳೆಯುತ್ತಲೇ ನಡೆದಿಲ್ಲವೆ? ದೋಷಯುಕ್ತ ಶಿಕ್ಷಣವೆಂದು ಕಂಡು ಹಿಡಿಯಲಿಕ್ಕಾದರೂ ಸುಶಿಕ್ಷಿತರು ಬೇಕು. ಆ ಮೇಲಾದರೂ ಬದಲಾದೀತು ಈ ಮನ್ವಂತರವು.

ರೇವಣಸಿದ್ದಪ್ಪನವರ ಉಡು ತೊಡಿಗೆಗಳು ಕಿರಿ ಬೆಲೆಯವು. ದಪ್ಪ ಧೋತರ, ಕಗ್ಗ ಅಂಗಿ, ಬಿಳಿಯ ರುಮಾಲು ಇಷ್ಟಾದರೆ ಅವರ ಉಡಿಗೆ ತೊಡಿಗೆ ಮುಗಿಯಿತು. ಊಟ ತೀರ ಸಾದಾ ಜೋಳದ ರೊಟ್ಟಿ, ಪಲ್ಲೆ. ಅನ್ನ ತೀರಿತು. ಸಾದಾ ಊಟದ ವಿವರಣೆಯನ್ನು ಬೇಕೆಂತಲೇ ಮಾಡಬೇಕಾಯ್ತು: ಸಾದಾ ಊಟವೆಂದು ಹೇಳಿಕೊಳ್ಳುತ್ತಿರುವವರು ಚಪಾತಿ. ಅನ್ನ, ಸಾರು, ತುಪ್ಪ, ಹಾಲು ಹೊಸರು ಎಂದು ಒಂದು ಕಡೆ ವಿವರಿಸಿದ್ದನ್ನು ನೋಡಿದ್ದೇನೆ. ಅಬ್ಬಬ್ಬಾ! ಇದು ಸಾದಾ ಊಟವೇ? ನಮ್ಮಲ್ಲಿಯ ಬಡವರಿಗೆ ಇಂಥ ಊಟದ ಸೌಭಾಗ್ಯವು ಹಬ್ಬ ಹುಣ್ಣಿವೆಗಳಲ್ಲಿ ಒದಗುತ್ತಿರುವದಿಲ್ಲ. ಇರಲಿ. ಈ ರೀತಿಯಾಗಿ ಕೈ ಬಿಗಿ ಹಿಡಿದು ಸಂಸಾರ ಮಾಡಿ, ಹಣ ಸಂಗ್ರಹ ಮಾಡಿದ್ದರೇನು ರೇವಣ ಸಿದ್ದಪ್ಪನವರು? ಇಲ್ಲ. ನಾಲ್ವತ್ತು ಐವತ್ತು ರೂಪಾಯಿ ಸಂಬಳ ಸಿಕ್ಕರೂ ಅದರೊಳಗಿನ ಅದೆಷ್ಟೋ ಭಾಗವನ್ನು ಬಂಧು ಬಾಂಧವರಿಗೆಲ್ಲ ಕಳಿಸಿ ಬಿಡುತ್ತಿದ್ದರು. ಈಗ ಒಂದು ಮಾತು ನೆನಪಿಗೆ ಬರುತ್ತದೆ. ಏನೆಂದರೆ--ಶ್ರೀ ಅರವಿಂದ ಘೋಷರು ಬಡೋದೆಯಲ್ಲಿದ್ದಾಗ ಹೀಗೆಯೇ ಸಾದಾತನದಿಂದ ಇರುತ್ತಿದ್ದರು. ಏಳೆಂಟು ನೂರು ರೂಪಾಯಿ ಸಂಬಳ ಬಂದರೂ ತಿಂಗಳ ಕಡೆಯಲ್ಲಿ ಅವರ ಹತ್ತರ ಒಂದು ಪೈ ಸಹ ಇರುತ್ತಿದ್ದಿಲ್ಲವಂತೆ! ದುಶ್ಚಟಗಳಿಲ್ಲ; ವಿಷಯ ಆರಾಮುವಿಲ್ಲ. ಅಹಮ್ಮದಾಬಾದ ಗಿರಣಿಯ ಅರಿವೆ ತೊಡುತ್ತಲೂ ಕಾಲಲ್ಲಿ ಆರೆನಾಡಿನ ಟಿಸಿಲು ಮೋಚ್ಚಿಗಳನ್ನು ಮೆಡುತ್ತಲೂ ಕೂದಲಿಗೆ ಎಣ್ಣೆ ಸಹ ಹಚ್ಚದೆ ಜಿಪರಿಬಿಡುತ್ತಲೂ ಶ್ರೀ ಅರವಿಂದರು ಇರುತ್ತಿದ್ದರು. ಆಂಗ್ರೇಜಿ ಕಲಿತವರು, ವಿಲಾಯತಿಗೆ ಹೋಗಿ ಬಂದವರು ಹೀಗೆ ಯಾರಾದರೂ ಇದ್ದುದನ್ನು ತೋರಿಸಲಿಕ್ಕಾಗದು. ಇಸಿರಲಿ. ರೇವಣಸಿದ್ದಪ್ಪನವರು ಜಂಗಮರ ಸಲುವಾಗಿ ವಿಶೇಷ ಖರ್ಚು ಮಾಡುವರು. ಅವರು ಎಂಥವರಿದ್ದರೂ ಕಣ್ಣು ಮುಚ್ಚಿ ಬೇಡಿದ್ದನ್ನು ಕೊಡುತ್ತಲೂ ಇದ್ದರು. ಇಂಥ ಫೊಳ್ಳು ನೆಲ ಸಿಕ್ಕರೆ ಮೊಳಕೈಯಿಂದ ಅಗಿಯುವವರಿಗೇನು ಕಡಿಮೆ? ಇವರ ಈ ಗುಣದಿಂದ ಎಷ್ಟೋ ಜನರು ಕೈಬೆಚ್ಚಗೆ ಮಾಡಿಕೊಂಡರಲ್ಲವೇ? ಯಾರು ಏನು ಮಾಡಲಿ. ಅವರ ಉದ್ದೇಶವೇನಿತ್ತೆಂಬುದನ್ನು ನೋಡಬೇಕಂತೆ. ಕಳ್ಳನು ಕದಿಯಲಿಕ್ಕೆ ಬಂದರೂ ಶ್ರೀಬಸವಣ್ಣನವರು ಅವನನ್ನು ಕೂಡಲಸಂಗಮದೇವನೆಂಬ ಭಾವದಿಂದ ಕಂಡರಲ್ಲವೇ? ಇವರ ತಮ್ಮಂದಿರೊಬ್ಬರು ಮುನ್ನೂರು

ರೂಪಾಯಿ ಸಾಲ ಮಾಡಿಕೊಂಡು ಇವರ ಹತ್ತಿರ ಓಡಿ ಬಂದರು. ಅವರಿಗೆ ಒಂದು ತುಟಿ ಎರಡು ಮಾಡದೆ ಮುನ್ನೂರು ರೂಪಾಯಿಗಳನ್ನು ಅವರ ಕೈಯಲ್ಲಿಟ್ಟು ಕಳಿಸಿದರು. ಆಗ ಅವರ ಹತ್ತಿರ ಏನೂ ಇರಲಿಲ್ಲವಂತೆ. ಅಂಥ ಹೊತ್ತಿನಲ್ಲಿಯೂ ಕೈಗಡ ಮಾಡಿ ರೂಪಾಯಿ ಕೊಟ್ಟು ಬುದ್ಧಿ ಹೇಳಿಕಳಿಸಿದರು. ಹೀಗೆ ಅನೇಕ ಸಾರೆ ಆಗಿವೆ "ಮತ್ತೊಬ್ಬನಿಗೆ ಸಹಾಯ ಮಾಡಿ ಅವನನ್ನುಳಿಸಲು ನಾವು ಉಪವಾಸ ಸತ್ತರೂ ಸರಿಯೇ!" ಎಂದು ವಿವೇಕಾನಂದ ಸ್ವಾಮಿಗಳು ಹೇಳುತ್ತಾರೆ.* ಬೆನ್ನಿಗೆ ಬಿದ್ದ ಅಣ್ಣ ತಮ್ಮಂದಿರಿಗೆ ಸಹಾಯ ಮಾಡುವುದು ಸಹಜವೇ ಇದೆ. ಆದರೆ ಅಣ್ಣ ತಮ್ಮಂದಿರು ಮುರುಳನನ್ನು ಕಂಡು ಹಗಲೆಲ್ಲ ಪಾತ್ರದವರಂತೆ ಸೆಳಕೊಳ್ಳಹತ್ತುವದೇನೂ ಯೋಗ್ಯವಲ್ಲ. ಇಂಥ ಸಹಾಯ ಮಾಡುವುದೂ ಉಂಡ ಅಯ್ಯಗಳನ್ನು ಎಳತಂದು ಉಣ್ಣಿಸು ವುದೂ ಒಂದೇ! ವ್ಯಾವಹಾರಿಕರು ರೇವಣಸಿದ್ದಪ್ಪನವರನ್ನು ಈ ಬಗ್ಗೆ ಹಳಿಯಬಹುದು. ಆದರೆ ಅವರ ಭಾವನೆಯನ್ನೂ ಅವರು ಮಾಡುವ ಉಪದೇಶವನ್ನೂ ಮನದಂದರೆ ಹಳಿಯಲಾರರು. "ನಮಗಾಗಿ ನಮ್ಮ ಸುಖದ ಸಲುವಾಗಿ ನಮ್ಮ ವಿಲಾಸಕ್ಕಾಗಿ ಖರ್ಚ ಮಾಡುವುದು ಕಳ್ಳತನ." (ಶ್ರೀಅರವಿಂದರು) ಹೀಗಿದ್ದರೆ ಸಂಸಾರವನ್ನೇಕೆ ಮಾಡಿಕೊಂಡಿರಬೇಕು? ಸನ್ಯಾಸಿಯಾಗಿ ಹೋದರೆ ಒಳ್ಳೆಯದಲ್ಲವೇ? ರೇವಣಸಿದ್ದಪ್ಪನವರಿಗೆ ಸನ್ಯಾಸಿಯ ವೇಷ ಬೇಕಾಗಿದ್ದಿಲ್ಲ, ಭಾವ ಬೇಕಾಗಿತ್ತು.

"ನೀವು ಸಂಸಾರ ಮಾಡಿಕೊಂಡು ಇದ್ದು ಬಿಡಿರಿ ಅದರಲ್ಲಿ ದೋಷವಿಲ್ಲ. ಆದರೆ ಈಶ್ವರನಲ್ಲಿ ಮನಸ್ಸನ್ನಿಡಬೇಕು. ಹಾಗಿಲ್ಲದಿದ್ದರೆ ಏನೂ ಆಗುವದಿಲ್ಲ. ಒಂದು ಕೈಯಿಂದ ಕೆಲಸ ಮಾಡಿ ಮತ್ತೊಂದು ಕೈಯಿಂದ ಈಶ್ವರನನ್ನು ಹಿಡಿದುಕೊಂಡು ನಿಲ್ಲಿರಿ. ಈ ಲೋಕದಲ್ಲಿ ನಿಮ್ಮ ಕೆಲಸವೆಲ್ಲ ಮುಗಿದ ಮೇಲೆ ಎರಡೂ ಕೈಗಳಿಂದ ಭಗವಂತನನ್ನು ಹಿಡಿದುಕೊಳ್ಳಿರಿ" —ಶ್ರೀ ರಾಮಕೃಷ್ಣ ಪರಮಹಂಸರು.

---

ಕಾಗೆ ಒಂದಗುಳ ಕಂಡರೆ ಕರೆಯದೇ ತನ್ನ ಬಳಗವನು? ಕೋಳಿಯೊಂದು ಗುಟಕಕಂಡರೆ ಕೂಗಿ ಕರೆಯದೇ ತನ್ನ ಕುಲವನೆಲ್ಲವನು? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಳಿಂದ ಕರಕಷ್ಟಕಾಣಾ ಕೂಡಲಸಂಗಮದೇವಾ.

— ಶ್ರೀ ಬಸವೇಶ್ವರರು

" ಸಂಸಾರವು ಧರ್ಮಕ್ಕೆ ಅಡ್ಡಬರುವುದೆಂದು ಎನ್ನಬೇಡಿರಿ.....ಅರಣ್ಯ ಇಲ್ಲದೆ ಏಕಾಂತ ವಾಸವು ಅದೊಂದು ಸಾಧನೆ ಮಾತ್ರ. ಆರಣ್ಯವೆಂದರೆ ವಿಶ್ವವಿದ್ಯಾಲಯದಲ್ಲಿಯ ಅಭ್ಯಾಸ. ಸ್ತ್ರೀ-ಪುತ್ರಾದಿ ಬಂಧುಬಾಂಧವರು ಸ್ತ್ರೀ-ಪುರುಷರೆಂದು ತಿಳಿಯದೆ ದೇವತಾ ಸ್ವರೂಪರೆಂದು ಭಾವಿಸುವುದೇ ಸರ್ವಸಂಗಪರಿತ್ಯಾಗವು. ಮೈಗೆ ಬೂದಿ ಹಚ್ಚಿಕೊಂಡರೆ ವೈರಾಗ್ಯತಾಳಿದಂತಾಗಲಿಲ್ಲ. ಸಕಲ ಪದಾರ್ಥಗಳನ್ನು ಪರಮಾತ್ಮಭಾವನೆಯಿಂದ ನೋಡುವುದೇ ವೈರಾಗ್ಯ." --ರಾಮತೀರ್ಥ ಸ್ವಾಮಿಗಳು.

ಹೀಗಿದ್ದರೆ ದುಡ್ಡು ಗಳಿಸುವುದೇಕೆ ? ಹೆಂಡಿರು ಮಕ್ಕಳನ್ನೂ ತಾಯಿತಂದೆಗಳನ್ನೂ ಕಾಪಾಡುವುದಕ್ಕೆ! ಈ ಬಗೆಗೆ ಶ್ರೀರಾಮಕೃಷ್ಣಪರಮಹಂಸರು ಹೇಳಿರುವದೇನಂದರೆ—"ಸಂಪಾದನೆ ಮಾಡುವುದೇ ಉದ್ದೇಶವಲ್ಲ. ಈಶ್ವರ ಸೇವೆಯನ್ನು ಮಾಡುವುದೀಗ ಉದ್ದೇಶ. ಹಣದಿಂದ ಈಶ್ವರಸೇವೆ ಆಗುವ್ವಾದರೆ ಆಗ ಅದಕ್ಕೆ ದೋಷವಿಲ್ಲ. ಹೆಂಡರು ಮಕ್ಕಳಿಗೆ ಉಣ್ಣುವದಕ್ಕೂ ತೊಂದರೆಯಾಗಬಾರದು. ಮಕ್ಕಳು ದೊಡ್ಡವರಾಗಿ ಸಂಸಾರವನ್ನು ನೋಡಿಕೊಳ್ಳುವುದಕ್ಕೆ ಸಮರ್ಥರಾದರೆ ಆಗ ಆ ಭಾರವನ್ನು ನಾವು ವಹಿಸಬೇಕಾದ್ದಿಲ್ಲ. ಹಕ್ಕಿಯು ಮರಿಗೆ ಮೇವನ್ನು ಹುಡುಕಲಿಕ್ಕೆ ಕಲಿಸುತ್ತದೆ. ಆಮೇಲೆ ಆ ಮರಿಯು ಮರಳಿ ತನ್ನ ಮೇವಿಗಾಗಿ ಹತ್ತಿರಕ್ಕೆ ಬಂದರೆ ಅದನ್ನು ಕುಕ್ಕಿ ಓಡಿಸಿ ಬಿಡುತ್ತದೆ." ಅಂತೂ ರೇವಣಸಿದ್ದಪ್ಪನವರು ಈ ರೀತಿ ಪ್ರಪಂಚ ಮಾಡಿ ಪಾರಮಾರ್ಥವನ್ನು ಸಾಧಿಸುವರಾಗಿದ್ದರು.

ಅವರ ಮದುವೆಯು ಮಾತನ್ನೇ ಮರೆತುಬಿಟ್ಟಿರುವೆ. ಅವರ ೨೪-೨೫ ವಯಸ್ಸಿನ ಸುಮಾರಿಗೆ ಅವರ ಮದುವೆಯಾಯಿತು. ತಮ್ಮ ಹೊಟ್ಟೆ ತುಂಬಿಸಿಕೊಂಡು ಹೆಂಡಿರು ಮಕ್ಕಳನ್ನು ಸಲಹುವ ಶಕ್ತಿ ಬರುವ ತನಕ ಇವರು ಮದುವೆಯಾಗಿರಲಿಲ್ಲ. ಸಂಬಳವಂತರಾದ ಮೇಲೆ ಮದುವೆ ಮಾಡಿಕೊಂಡರು. ಅವರ ಪತ್ನಿಯರಾದರೂ ಅವರಿಗೆ ಅನುಕೂಲವಾಗಿಯೇ ಇದ್ದರು. " ಯಾರಿಗೆ ಈಶ್ವರನಲ್ಲಿ ಆಂತರಿಕವಾದ ಭಕ್ತಿಯಿದೆಯೋ ಅವರಿಗೆ ಅರಸರು, ಕೆಟ್ಟವರು, ಹೆಂಡರು ಮುಂತಾದವರು ಸಕಲರೂ ವಶವಾಗುತ್ತಾರೆ. ಆಂತರಿಕವಾದ ಭಕ್ತಿಯು ನಮ್ಮಲ್ಲಿದ್ದರೆ ಬರಬರುತ್ತ ಹೆಂಡತಿಯೂ ಈಶ್ವರನ ಹಾದಿಯಲ್ಲಿ ಬರಬಲ್ಲಳಾಗುತ್ತಾಳೆ." (ರಾ.ಪ.ಹಂ.) ರೇವಣಸಿದ್ದಪ್ಪನವರ ಆಂತರಿಕ ಭಕ್ತಿಯಿಂದಲೇ ಅವರ ಹೆಂಡತಿಯೂ ಅನುಕೂಲವಾಗಿದ್ದರು. ಇಲ್ಲಿ

ದ್ದಿದ್ದರೆ ಎತ್ತು ಎರೆಗೆ ಕೋಣ ಕೆರೆಗೆ! "ನಾ ಹಿಡಿ ನೀ ಹಿಡಿ, ಹೊಡಿ ಬಡಿ" ಆದರೆ ಅವರ ಹೆಂಡತಿ ವೀರವ್ವನವರು ಅಶಿಕ್ಷಿತರಾಗಿದ್ದರೂ ಒಳ್ಳೆಯವರಾಗಿದ್ದರು.

ಅವರ ಮನೆಯಲ್ಲಿ ಕುಳ್ಳಿರಲಿಕ್ಕೆ ಮಣೆಯಿರಲಿಲ್ಲ. ಹೆಚ್ಚಾಗಿ ತಂಬಿಗೆ ತಾಟು ಇರಲಿಲ್ಲ. ಶಿವಪೂಜೆ ಮಾಡಿಕೊಳ್ಳುವಾಗ ಮಾತ್ರ ಒಂದು ಬಿಟ್ಟಿ ಚಾಪೆಯನ್ನು ಹಾಕಿಕೊಳ್ಳುತ್ತಿದ್ದರು. ಮನೆಗೆ ಬಂದವರಿಗೆ ಅದನ್ನೇ ಕೊಟ್ಟು ತಾವು ನೆಲದ ಮೇಲಾಗಲಿ ತಟ್ಟಿನ ಮೇಲಾಗಲಿ ಕುಳ್ಳಿರುತ್ತಿದ್ದರು. ಇಲ್ಲಿ ಒಂದು ಮಾತು ನೆನಪಿಗೆ ಬರುತ್ತದೆ. ಮುಹಮ್ಮದಗವಾನನೆಂಬ ಮಂತ್ರಿಯು ತೀರಿಕೊಂಡಾಗ ಅವನ ಆಸ್ತಿಯನ್ನೆಲ್ಲ ಪರೀಕ್ಷಿಸಲಾಯಿತಂತೆ! ಹರಕು ಚಾಪೆ, ಒಡಕು ಗಡಿಗೆ! ಮಂತ್ರಿಯೆಂದರೇನು ಅಂಥ ಆಸ್ತಿಯೆಂದರೇನು? ಗವಾನನು ಪರೋಪಕಾರಿಯಾದ ದೇವಭಕ್ತನು. ಆದರೆ ನಮ್ಮಂಥ ಸಾಮಾನ್ಯರ ವೈಭವವನ್ನು ನೋಡಿರಿ. ನಮ್ಮ ಮನೆ-ಮಾರುಗಳು ಹೇಗೆಯೇ ಇರಲೊಲ್ಲವೇಕೆ, ವೇಷಭೂಷಣಗಳನ್ನು ನೋಡಿದರೆ ದೇಸಾಯಿ ದೇಶಪಾಂಡೆಯವರಂತೆ ಕಾಣಿಸಿಕೊಳ್ಳುತ್ತೇವೆ. ಗಡಿಯಾರ, ಪೆನ್ನು, ಚಹ-ಸಿಗರೇಟುಗಳ ಸಹವಾಸ— "ವೆಚ್ಚವಿದ್ದರೆ ನಿಚ್ಚಾ ಪರೂತಕ್ಕೆ ಹೋಗುವವರು." ಆದರೆ ರೇವಣಸಿದ್ದಪ್ಪನವರ ಇರುವಿಕೆ ತೀರ ಸಾಧಾರಣ. ಸರಳ ಜೀವನ ಅವರದು.

ಊರ ಜನರನ್ನು ಹಚ್ಚಿಕೊಳ್ಳುವುದು ಅವರಿಗೆ ಸ್ವಾಭಾವಿಕವಾಗಿತ್ತು. ಅವರು ರಜೆಯ ಮೇಲಿರುವಾಗ ಅವರ ಅಸಿಸ್ಟಂಟರ ಮೇಲೆ ಮೂಕ ಅರ್ಜಿಗಳಾಗಿದ್ದವು. ರೇವಣಸಿದ್ದಪ್ಪನವರು ಕೆಲವೇ ದಿವಸ ಊರಲ್ಲಿಲ್ಲದಿದ್ದಾಗ ಹಾಗೆ ಯಾಕಾಗಬೇಕು? ಅಸಿಸ್ಟಂಟರ ಸುಡಿಗೆ ಪೀಗೆ ಯಾಕೆ ಆಯಿತು? ಆ ಅರ್ಜಿಯ ಚೌಕಸಿಯ ಸಲುವಾಗಿ ವರಿಷ್ಠ ಅಧಿಕಾರಿಗಳು ಸ್ವತಃ ಬರಬೇಕಾಯಿತು. ಬಂದು ಹೆಡ್‌ಮಾಸ್ತರರ ಸಮಕ್ಷಮದಲ್ಲಿ ತಮ್ಮ ಕಡೆಗೆ ಬಂದ ಅರ್ಜಿಯ ವಿಚಾರಣೆ ಮಾಡಹತ್ತಿದರು. ರೇವಣಸಿದ್ದಪ್ಪನವರು ಅರಿಷ್ಠಾಧಿಕಾರಿಗಳಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೇನಂದರೆ—ಅಸಿಸ್ಟಂಟರು ಇನ್ನೂ ಅನನುಭವಿಕರು. ಅಂಥವರ ಅಪರಿಪಕ್ವ ನಡತೆಯಿಂದ ಸಂಗಡಿಗರಿಗೆ ತೊಂದರೆಯಾಗುವುದು ನಿಜವೇ. ಆದರೂ ಕರ್ತವ್ಯವನ್ನು ಇನ್ನು ಮುಂದೆ ಸರಿಯಾಗಿ ಮಾಡುತ್ತ ಹೋಗುವಂತೆ ಅವರಿಗೆ ಎಚ್ಚರಿಕೆ ಕೊಡುವುದು ಅವಶ್ಯವು. ಅವರನ್ನು ಬೇರೆ ಕಡೆಗೆ ವರ್ಗಮಾಡಿದರೆ ಅವರ ಸಂಸಾರವೆಲ್ಲ ಅಸ್ತವ್ಯಸ್ತವಾಗುವ ಕಾರಣ ಅವರಿಗೆ ಇದೊಂದು ಸಾರೆ ಚೆನ್ನಾಗಿ ತಿಳಿಸಿ

ಹೇಳಿರಿ ” ಎಂದು ಅಭಿಪ್ರಾಯಪಟ್ಟರು. ಮೇಲಧಿಕಾರಿಗಳು ರೇವಣಸಿದ್ದಪ್ಪ ನವರ ಸಲಹೆಯಂತೆ ತಮ್ಮ ಕೆಲಸ ತೀರಿಸಿಕೊಂಡು ಹೋದರು.

ರೇವಣಸಿದ್ದಪ್ಪನವರು ಜನರನ್ನು ಹಚ್ಚಿಕೊಳ್ಳುವ ಸ್ವಭಾವದವರೆಂಬುದು ನಮಗೆ ಈ ಮೊದಲೇ ತಿಳಿದಿದೆ. ಜನರಲ್ಲಿ ಅವರ ಬಗ್ಗೆ ಪ್ರೇಮವೆಸ್ಟಿರಿ, ಭಕ್ತಿಯೆಸ್ಟಿರಿ ಇವರಿಟ್ಟಂತೆ ಜನರು ಸಹ ಅವರ ಮೇಲೆ ಪ್ರೇಮವನ್ನೂ ಭಕ್ತಿ ಯನ್ನೂ ಇಟ್ಟಿದ್ದರು. ಒಮ್ಮೆ ಅಸಿಸ್ಟಂಟ ಕಲೇಕ್ಟರರು ಹತ್ತರಿಕೆಗೆ ಬಂದಾಗ ತಮ್ಮ ಬಿಡಾರದಿಂದ ಊರೊಳಗೆ ಕೆಲವು ಪ್ರಮುಖ ಜನರೊಂದಿಗೆ ಹೊರಟಿ ದ್ದರು. ಅದೇ ಹೊತ್ತಿಗೆ ರೇವಣಸಿದ್ದಪ್ಪನವರು ಶಾಲೆಗೆ ಹೊರಟಿದ್ದರು. ಅಧಿಕಾರಿಗಳೊಡನೆ ಇದ್ದ ಜನರು ಮಾಸ್ತರರು ಬರುವುದನ್ನು ಕಂಡು ಒಬ್ಬೊಬ್ಬ ರಂತೆ ಎಲ್ಲರೂ “ಶರಣು! ಶರಣು!!” ಎಂದು ಕೈಮುಗಿದರು. ಆಗ ಸಾಹೇಬರು ಅದನ್ನು ಕಂಡು ಇವರಾರೆಂದು ವಿಚಾರಿಸಿದರು. ಅವರು ತಮ್ಮೂರ ಶಾಲೆಯ ಶಿಕ್ಷಕರೆಂದೂ ಸಾಧುಸ್ವಭಾವಿಗಳೆಂದೂ ಜನರು ಹೇಳಿದರು. ರೇವಣ ಸಿದ್ದಪ್ಪನವರ ವರ್ಚಸ್ಸು ಕಂಡು ಸಾಹೇಬರಿಗೆ ಆಶ್ಚರ್ಯವಾಯಿತು.

ರೇವಣಸಿದ್ದಪ್ಪನವರು ತಮ್ಮ ಸ್ವಂತದ ಕೆಲಸವನ್ನು ಬಹುತರವಾಗಿ ತಾವೇ ಮಾಡಿಕೊಳ್ಳುವರು. ಬಟ್ಟೆಬರೆಗಳನ್ನು ಒಗೆದುಕೊಳ್ಳುವುದು, ಶಿವ ಪೂಜೆಗೆ ಪತ್ರಿಪುಷ್ಪಗಳನ್ನು ತಂದುಕೊಳ್ಳುವುದು; ಹಾಸಿಗೆ ಹೊದಿಕೆಗಳನ್ನು ಬಿಡಿಸಿ ತೆಗೆದಿಡುವುದು ಮೊದಲಾದ ಕೆಲಸಗಳನ್ನು ಅವರು ಇನ್ನಾರಿಗೂ ಹೇಳದೆ ತಾವೇ ಮಾಡಿಕೊಳ್ಳುತ್ತಿದ್ದರು. ಆ ಕೆಲಸಗಳನ್ನೆಲ್ಲ ಮಾಡಿಕೊಡುವ ಪ್ರೀತಿಯ ವಿದ್ಯಾರ್ಥಿಗಳು ಬೇಕಾದಷ್ಟು ಜನರಿದ್ದರೂ ಅವರಿಗೆ ಮಾಡಗೊಡು ತ್ತಿದ್ದಿಲ್ಲ. ನನ್ನಂತೆ ನಿಮ್ಮ ಕೆಲಸಗಳನ್ನು ನೀವೇ ಮಾಡಿಕೊಳ್ಳುತ್ತ ಹೋಗಿರಿ. ಅಂದರೆ ನನ್ನ ಕೆಲಸಗಳನ್ನು ಮಾಡಿಕೊಟ್ಟಂತೆಯೇ ಆಗುವ ದೆಂದು ಹೇಳುವರು. ಮ. ಗಾಂಧಿಯವರು ದಂಡಿಯಾತ್ರೆಗೆ ಬರಿಗಾಲಿನಿಂದ ನಡೆಯುತ್ತ ಹೊರಟಾಗ ತಮ್ಮ ಹಾಸಿಗೆ ಹೊಂದಿಗೆ, ಹಂಜಿ ಬಿಂಗರಿ, ಪುಸ್ತಕ ಪಾತ್ರೆ ಮೊದಲಾದವುಗಳನ್ನೆಲ್ಲ ತಾವೇ ಹೊರುತ್ತಿದ್ದರು. ಯಾರಾದರೂ ಅದನ್ನು ಹೊರಲಿಕ್ಕೆ ಬೇಡಿದರೆ ಮಹಾತ್ಮರು —“ನನ್ನೊಬ್ಬನ ಉಸಾಬರಿ ಯನ್ನು ಮಾಡಿಕೊಳ್ಳುವುದು ನನಗೇ ಜಡವಾದರೆ ಮೂವತ್ತುಮೂರು ಕೋಟಿ ಭಾರತೀಯರ ಹಿತಕ್ಕಾಗಿ ಬಡಿದಾಡುವುದು ನನಗೆ ಸಾಧ್ಯವೇ ?” ಎಂದು ಕೇಳಿದರಂತೆ !

---

# ೪. ಕರ್ಮತತ್ಪರತೆ

**ಪರಮ ತತ್ತ್ವಜ್ಞಾನಮಾರ್ಗದಿ । ಹಿರಿಯರಾವುದ ಪಡೆದರದನೇ ।**
**ವರ ತಪೋಽನುಷ್ಠಾನದಿಂದೈದುವರು ಯೋಗಿಗಳು ॥**
**ಹಿರಿದು ನಿಸ್ಸಂಗತ್ವ ಕರ್ಮವು । ನಿರುತವೊಂದೆಂದಾವನೊಬ್ಬನು ।**
**ಭರದಿ ಕಂಡವನಾತನೇ ಕಂಡವನು ತತ್ತ್ವವನು ॥**

—ನಾಗರಸನ ಕನ್ನಡ ಗೀತೆ.

ನಮ್ಮ ರೇವಣಸಿದ್ಧಪ್ಪ ಮಾಸ್ತರರು ಇಂಗ್ಲಿಷು ಸಾಲೆಯಲ್ಲಿ ಕಲಿತವರಲ್ಲವಾದರೂ ಮೂರನೇ ವರುಷದ ಟ್ರೇಂಡರಿದ್ದುದರಿಂದ ಇವರಿಗೆ ಉಳಿದ ಎಷ್ಟೋ ಜನರಂತೆ ಪಾಶ್ಚಾತ್ಯರ ಬೆಡಗು ಬಿನ್ನಾಣಗಳು ಮುಸುಗಬಹುದಾಗಿತ್ತು. ಆದರೆ ಹಾಗೆ ಆಗಲಿಲ್ಲ. ಶ್ರೀ ಅರವಿಂದರೆನ್ನುವಂತೆ—"ಹೊಸ ಹೊಸತಾಗಿ ಪಾಶ್ಚಾತ್ಯರ ವೇಷಭೂಷಣಗಳಿಗೂ ಅವರ ನಡೆನುಡಿಗಳಿಗೂ ಜನರು ಮರುಳಾಗಿ ಅದರಂತೆ ಮಾಡಲೆಳಸುತ್ತಾರೆ; ಮಾಡುತ್ತಾರೆ. ಬರಬರುತ್ತ ಅದು ಓಕರಿಕೆ ಹಿಡಿದು ಪೌರ್ವಾತ್ಯರ ಹಾದಿಗೇ ಬರಬೇಕಾಗುವದು." ಬಲೆಯಲ್ಲಿ ಸಿಕ್ಕವರು ಮತ್ತೆ ಹಾದಿಗೆ ಬರುತ್ತಾರಂತೆ. ರೇವಣಸಿದ್ಧಪ್ಪನವರು ಬಲೆಯ ಸನಿಹಕ್ಕೆ ಸಹ ಹೋಗಿಲ್ಲ. ಅವರು ಸಿಕ್ಕುಬೀಳುವುದೆಂತು? ಈ ವಿದ್ಯಾವ್ಯಾಸಂಗದಿಂದ ಎಲ್ಲರಲ್ಲಿಯೂ ಉಂಟಾಗುವ ವಿಮರ್ಶಕ ಬುದ್ಧಿಯು ಅವರಲ್ಲಿಯೂ ಮೊಳಕೆಯೊಡೆದಿತ್ತು. ಈ ಸ್ವಭಾವವು ಕೆಲವರಿಗೆ ಅಸಹ್ಯವೆನಿಸಿದರೂ, ಕಣ್ಣು ಮುಚ್ಚಿ ಅಹುದೆನ್ನುವದಕ್ಕಿಂತ 'ಹೀಗೇಕೆ?' ಎಂದು ಹಿಸುಕಿ ಕೇಳಿ ಮನಗಂಡು 'ಅಹುದು' ಎನ್ನುವುದು ಸ್ಥಿರಕಾರಿಯಾಗಿದೆ. "ಇಂದ್ರಿಯ ಪ್ರಪಂಚವು ಪಾಶ್ಚಾತ್ಯರಿಗೆಷ್ಟು ಪ್ರಾಮುಖ್ಯವೋ ಎಷ್ಟು ಸತ್ಯವೋ, ಪ್ರಾಚ್ಯರಿಗೆ ಪಾರಮಾರ್ಥಿಕ ವಿಷಯವು ಅಷ್ಟೇ ಸತ್ಯ" (ಶ್ರೀ ವಿವೇಕಾನಂದರು.)

ರೇವಣಸಿದ್ಧಪ್ಪನವರು ಇನ್ನೂ ಚಿಕ್ಕವರಿರುವಾಗಲೇ ಲಿಂಗಪೂಜೆ, ದೇವದರ್ಶನ, ಭಜನ, ಮಂತ್ರಪಠಣ ಮುಂತಾದ ಕರ್ಮಗಳನ್ನು ಮಾಡುತ್ತಿದ್ದರೆಂದು ಈ ಮೊದಲೇ ಹೇಳಿದೆ. ಅವರ ಕರ್ಮವು, ಏಕಾದಶಿ–ಶಿವರಾತ್ರಿಗಳನ್ನು ಮಾಡಿ ಹೊಟ್ಟೆ ಕೆಡುವ ತನಕ 'ಫರಾಳ' ಮಾಡಿದಂತಲ್ಲ. ಅವರು

ಅರಿತು ಮಾಡುವರು. ಅವರು ಭಕ್ತಿಯುತರಾಗಿ ಕರ್ಮವನ್ನು ಮಾಡುತ್ತಿದ್ದರು. "ಕಲ್ಲು ನಾಗರ ಕಂಡರೆ ಹಾಲನೆರೆಯೆಂಬರು | ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ | ಉಂಬುವ ಜಂಗಮ ಬಂದರೆ ನಡೆಯೆಂಬರು | ಉಣ್ಣದ ಲಿಂಗಕ್ಕೆ ಬೋನವ ಹಿಡಿರೆಂಬರಯ್ಯಾ" ಎಂದು ಶ್ರೀಬಸವಣ್ಣನವರು ನುಡಿದಿದ್ದಾರೆ. ರೇವಣಸಿದ್ದಪ್ಪನವರು ಯುಕ್ತಾಯುಕ್ತಗಳನ್ನು ಯೋಚಿಸಿ ಕರ್ಮಮಾಡುವರು. ಕಣ್ಣುಮುಚ್ಚಿ ಕರ್ಮಮಾಡುವುದಕ್ಕಿಂತ ಅದನ್ನು ಬಿಟ್ಟುಕೊಡುವುದೇ ಒಳಿತು. ಜನಕಂಜಿ ನಡೆಯುವರು. ಸುಮ್ಮನೆಯಾಗಲಿ—ತೋರಿಕೆಗಾದರೂ ಮಾಡಬಹುದು. ಶ್ರದ್ಧೆಯಿಲ್ಲದೆ ಕರ್ಮ ಮಾಡುವುದಕ್ಕೆ ಆಗುವುದೇ ಇಲ್ಲ. ಶ್ರದ್ಧೆಯಲ್ಲಿ ಹರಿಗಡಿಯದ ಹುರುಪು ಇರುತ್ತದೆ. ಬಲುಮೆಯಲ್ಲಿ ದಣಿಯದ ಹುರುಪು ಎಲ್ಲಿ? "ಶ್ರದ್ಧೆಯು ಮನುಷ್ಯನಲ್ಲಿ ಹುಟ್ಟಿತೆಂದರೆ ಅವನ ಪುನರ್ಜನ್ಮವಾದಂತಾಗುವದು. ಹೇಳಲಿಕ್ಕೆ ಬಾರದಂಥ ಶಕ್ತಿಯು ಅವನಲ್ಲಿ ಬೇರೂರುವದು." ರೇವಣಸಿದ್ದಪ್ಪನವರು ಅವನ್ನೆಲ್ಲ ಏತಕ್ಕಾಗಿ ಮಾಡುತ್ತಿದ್ದರು? ಎಲ್ಲರೂ ಮಾಡುತ್ತಾರೆಂದಲ್ಲ. ಏನೋ ಒಂದು ಶ್ರದ್ಧೆಯಿತ್ತು. ಮಕ್ಕಳಾಗಲೆಂದು ಹನುಮಂತದೇವರಿಗೆ ಹೋಗುವಂತೆಯೂ, ಕಟ್ಟಳೆಯ ತೀರ್ಪು ತಮ್ಮಂತಾಗಲಿಕ್ಕೆ ನೂರೊಂದು ಜನ ಅಯ್ಯಗಳನ್ನು ಉಣ್ಣಿಸುವಂತೆಯೂ ರೇವಣಸಿದ್ದನವರು ಆಚರಿಸುತ್ತಿರಲಿಲ್ಲ. ಕರ್ಮಾಂಧತೆಯೂ ಅವರಲ್ಲಿರಲಿಲ್ಲ. ಹೀಗೇಕೆಯೆನ್ನುವ ವಿಮರ್ಶಕ ಬುದ್ಧಿ ಮಾತ್ರ ಇತ್ತು.

ರೇವಣಸಿದ್ದಪ್ಪನವರು ತಮಗೆ ಬೇಕಾದ ಪೂಜಾಸಾಹಿತ್ಯಗಳನ್ನು ತಾವೇ ಸಂಗ್ರಹಿಸಿಕೊಳ್ಳುವರು. ಪತ್ರಿಪುಷ್ಪಗಳನ್ನು ತಕ್ಕೊಂಡು ಬರುವುದೂ, ಜಂಗಮನನ್ನು ಕರೆತರುವುದೂ ಇವರದೇ ಕೆಲಸವಾಗಿತ್ತು. ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳುತ್ತಿದ್ದರೆ ಅದರಲ್ಲಿ ಅರಿದೇನು? ಕಲಿತವರು—ಹೆಡ್ ಮಾಸ್ತರರು ಹೀಗೆ ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಿದ್ದುದು ಸೋಜಿಗವೇ ಸೈ. ಇರಲಿ. ಅವರ ಜೊತೆಗೆ ದಿನಾಲು ಜಂಗಮನೊಬ್ಬನು ಊಟಕ್ಕಿರಬೇಕು. ವಿರಕ್ತಸ್ವಾಮಿಗಳೊಬ್ಬರು ದಿನಾಲು ಊಟಕ್ಕೆ ಬರುತ್ತಿದ್ದರು. ಸ್ವಾಮಿಗಳು ಒಮ್ಮೆ ಏತಕ್ಕೋ ಔಷಧವನ್ನು ತೆಗೆದುಕೊಂಡಿದ್ದರಂತೆ. ವಿರಕ್ತರಾದರೇನು, ಬ್ರಹ್ಮಚಾರಿಗಳಾದರೇನು ಹುಟ್ಟಬಂದ ಬಳಿಕ ರೋಗ, ಮುಪ್ಪು, ಮರಣಗಳು ಯಾರನ್ನೂ ಬಿಟ್ಟಿಲ್ಲವಷ್ಟೇ? ಸ್ವಾಮಿಗಳು

ಮೂರು ತಿಂಗಳು ಉಪ್ಪಿಲ್ಲದ ಸಪ್ಪಗೆ ಊಟ ಮಾಡಬೇಕಾಗಿತ್ತು. ಹೇಗೆ ಮಾಡುವುದು? ಮಾಸ್ತರರಿಗೆ ಜಂಗಮನಿಲ್ಲದೆ ಸಾಗುವದಿಲ್ಲ. ಜಂಗಮನು ಸುಮ್ಮನೆ ನೇಮಕ್ಕೆ ಬಂದುಹೋದರೆ ಸಮಾಧಾನವಿಲ್ಲ. ಪಂಕ್ತಿಭೋಜನ ವಾಗಲೇಬೇಕು. ಪಂಕ್ತಿಭೋಜನವಾದರೆ ಪಂಕ್ತಿಪ್ರಪಂಚವನ್ನು ಮಾಡು ವುದು ಹೇಗೆ? ಸ್ವಾಮಿಗಳಿಗೆ ಅಷ್ಟೊಂದು ತೊಂದರೆಯೆನಿಸದಿದ್ದರೂ ಮಾಸ್ತರ ರಿಗೆ ಅಸಮಾಧಾನವೆನಿಸುತ್ತಿತ್ತು. ಆ ಕಾರಣದಿಂದ ಸ್ವಾಮಿಗಳ ಪಥ್ಯ ತೀರುವ ವರೆಗೆ ಮಾಸ್ತರರೂ ಪಥ್ಯವನ್ನು ಮಾಡಿದರು! ಅಯ್ಯಗಳು ತಾವು ಹೇಗಾದರೂ ಇರಲೊಲ್ಲರೇಕೆ, ಅವರನ್ನು ಒಂದು ಉಚ್ಚಭಾವನೆಯಿಂದ ಮಾಸ್ತರರು ಕಾಣುತ್ತಿದ್ದರು. ಇದಕ್ಕೆಲ್ಲ ಅವರ ಶ್ರದ್ಧೆಯೇ ಕಾರಣವು. "ನಡೆಯಲರಿಯದೆ ಲಿಂಗವ ಪೂಜಿಸಿ ಫಲವೇನು? ಅವರ ಸುಖವೆನ್ನ ಸುಖ, ಅವರ ದುಃಖವೆನ್ನ ದುಃಖ ಕೂಡಲಸಂಗನ ಶರಣರ ಮನನೊಂದರೆ ಬೆಂದೆ ನಯ್ಯ" ಈ ವಚನದೊಳಗಿನ ತತ್ವವನ್ನವರು ಎಷ್ಟರ ಮಟ್ಟಿಗೆ ಪಾಲಿಸುತಿ ದ್ದರೋ ನೋಡಿಕೊಳ್ಳಿ.

ರೇವಣಸಿದ್ಧಪ್ಪನವರು ಒಮ್ಮೆ ಸ್ವಾಮಿಗಳನ್ನು ಊಟಕ್ಕೆ ಕರೆಯಲಿಕ್ಕೆ ಹೋದಾಗ, ಇದೇನು ಬಂತಪ್ಪಾ ಎಂದು ಅವರು 'ಡುಕ್ಕ' ಹೊಡೆದು ಮಲಗಿ ಬಿಟ್ಟರು. ಮಾಸ್ತರರಂತೂ ಮಲಗಿದವರನ್ನು ಎಬ್ಬಿಸುವದಿಲ್ಲ. ಗೊತ್ತಿತ್ತು ಸ್ವಾಮಿಗಳಿಗೆ. ಅಂದಮೇಲೆ ಮಲಗಲಿಕ್ಕೆ ಅಡ್ಡಿಯೇನು? ರೇವಣಸಿದ್ಧಪ್ಪ ನವರು ಅವರನ್ನು ಎಬ್ಬಿಸಲೂ ಇಲ್ಲ. ಎಚ್ಚರಿಸಲೂ ಇಲ್ಲ. ಹಾಗೆಯೇ ನಿಂತರು—ನಿಂತರು. ಕುಳಿತರು. ಬಳಿಕ ಮನೆಗೆ ಹೋಗಿ ಹಾದಿನೋಡುತ್ತ ಕುಳಿತರು. ನಾಲ್ಕು ಗಂಟೆಯ ಹೊತ್ತಿಗೆ ಸ್ವಾಮಿಗಳು ಎದ್ದು ಬಂದು ಊಟ ಮಾಡಿದಾಗ ಮಾಸ್ತರರ ಊಟವಾಯಿತು. "ಹಲವು ಮಣಿಯ ಕಟ್ಟಿ ಕುಣಿಕುಣಿದಾಡಿ, ಹಲವು ಪರಿಯಲಿ ವಿಭೂತಿಯ ಪೂಸಿ, ಗಣಾಡಂಬರದ ನಡುವೆ ನಲಿನಲಿದಾಡಿ, ಉಂಡು ತಾಂಬೂಲಗೊಂಡು ಹೋಹುದಲ್ಲ. ತನು ಮನಧನ ಸಮರ್ಪಿಸದವರ ಕೂಡಲಸಂಗಮದೇವರೆಂ ತೊಲೆವನಯ್ಯ"? ಈ ಮಾಸ್ತರರಂಥ ಸಭ್ಯಜನರನ್ನು ಸಾಮಾನ್ಯರು ಹುಚ್ಚನೆಂದು ಹೆಸರಿಡು ವರು. ಅವರನ್ನು ಎಷ್ಟೊ ಸಾರೆ ಮೋಸಮಾಡುವರು; ನಿಂದೆಯಾಡುವರು; ಕೇಡು ಮಾಡುವರು. ಆದರೆ ಕೊನೆಯಲ್ಲಿ, ಇಂಥ ಹುಚ್ಚರಿಂದಲೇ ಜಗತ್ತು ನಿಂತಿದೆಯೆಂದು ಅನುಭವಕ್ಕೆ ಬಾರದಿರುವದಿಲ್ಲ.

ಮಾಸ್ತರರೊಮ್ಮೆ ಲಿಂಗಪೂಜೆಗೆ ಕುಳಿತಿದ್ದಾಗ ಅವರ ಮಗು-ಕೂಸು ಆಡುತ್ತಾಡುತ್ತ ಉಪ್ಪರಿಗೆಯ ಮಾಳಿಗೆಯ ಮೇಲಿಂದ ಕೆಳಗೆ ಸೋಪಾನದ ಮೇಲೆ ಬಿದ್ದುಬಿಟ್ಟಿತು. ತಾಯಿಯು ಗಾಬರಿಯಾಗಿ ಎದೆಎದೆ ಬಡಕೊಳ್ಳುತ್ತ ಬಿದ್ದ ಕೂಸಿನ ಹತ್ತಿರ ಬಂದು ನೋಡುತ್ತಾರೆ. ಕೂಸಿನ ಕಾಲು ಮುರಿದಿದೆ. ಎದೆಯೊಡೆದು ನೀರಾಗಿ ಜೋರಾಡಿ ಅಳಹತ್ತಿದರು. ನೆರೆಹೊರೆಯವರು ನೆರೆದರು. ಆದರೆ ಲಿಂಗಪೂಜೆಗೆ ಕುಳಿತ ಮಾಸ್ತರರೇನು ಅಲುಗಾಡಲಿಲ್ಲ. ಲಿಂಗಪೂಜೆ ಮುಗಿಯುವ ವರೆಗೆ ಯಾರಪ್ಪನಿಗೆ ಏಳಬೇಕು? ತಮ್ಮ ಪೂಜೆಯೆಲ್ಲ ಮುಗಿದ ಮೇಲೆ ದೇವರು ಕೊಟ್ಟ ಕಷ್ಟವೆಂದೂ ಚಿಂತಿಸಬೇಡಿರೆಂದು ಹೇಳಿ ಆರಯಿಕೆ ಮಾಡಿದರು. ಮಾಸ್ತರರು ಇಷ್ಟೊಂದು ಕಲ್ಲೆದೆಯವರೇ? ಹೊಟ್ಟೆಯ ಮಗನನ್ನು ಪ್ರೀತಿಸದವರ ಕೈಯಲ್ಲಿ ಸಾಲೆಗೆ ಬರುವ ಹುಡುಗರ ಗತಿಯೇನು? ಆದರೆ ಅವರ ಪ್ರೇಮರಜ್ಜುವು ಕುಟುಂಬದವರಿಗೆ ತಳಕು ಹೊಡೆಯುವೆ ಇರಬಹುದೇ? ಪ್ರೇಮಬಂಧನ ಮಾತ್ರ ಇರಲಿಕ್ಕಿಲ್ಲ. ಪೂಜೆಗೆ ಕುಳಿತಾಗ ಆ ದೇವನಲ್ಲಿ ಸಿಲುಕಿದ ಮಮತೆಯ ಎಳೆಯನ್ನು ಚಿವುಟಕೊಂಡು ಬಂದು ಮಗನ ಮೇಲಿನ ಮೋಹಕ್ಕೆ ಕೆಚ್ಚು ಹಾಕುವುದು ಅವರಿಗೆ ಇಷ್ಟವಿಲ್ಲ. ಲಿಂಗಪೂಜಾದಿ ಕರ್ಮಗಳನ್ನು ಅವರು ಅಷ್ಟು ಹಟದಿಂದಲೇ ಮಾಡುತ್ತಿದ್ದರೆಂದು ಮತ್ತೊಂದು ಪ್ರಸಂಗದಿಂದ ತಿಳಿದುಬರುವದು. ಅತ್ತಾಲಟ್ಟಿ-ಎಂಬ ಹಳ್ಳಿಯಲ್ಲಿ ಒಮ್ಮೆ ಸಪ್ತಾಹ ಹಚ್ಚಿದ್ದರು. ಅಲ್ಲಿಯ ಕೆಲವು ಗೆಳೆಯರ ಆಗ್ರಹದಿಂದ ಮಾಸ್ತರರು ಅಲ್ಲಿಗೆ ಹೋಗಬೇಕಾಯಿತು. ಆಗ ಮಾಸ್ತರರ ಮೈಯೆಲ್ಲ ಹುರುಕು. ಮಣೆಯ ಮೇಲೆ ಚಪಗಾಲು ಹಾಕಿ ಕುಳ್ಳಿರಲಿಕ್ಕೂ ಬರುತ್ತಿರಲಿಲ್ಲ. ಮೇಲಾಗಿ ಔಷಧವನ್ನು ಹಚ್ಚಿಕೊಳ್ಳುವವರಲ್ಲ. ಅಂಥ ಪ್ರಸಂಗದಲ್ಲಿ ತುದಿಗಾಲ ಮೇಲೆ ಕುಳಿತು ಎರಡುಮೂರು ತಾಸುಗಳಂತೆ ಎರಡೂ ಹೊತ್ತು ಲಿಂಗಪೂಜೆ ಮಾಡುವುದನ್ನು ಬಿಟ್ಟವರಲ್ಲ. ಉಣ್ಣಲಿಕ್ಕೆ ೧೦ ನಿಮಿಷ ತಡವಾದರೆ ನಮ್ಮಂಥವರ ಲಿಂಗಪೂಜೆಗೆ ರಜೆ ಸಿಗುವದು.

ದಾಸಿಗಳ ಹೆಸರು ಕಸ್ತೂರಿಯ ಸುವಾಸನೆಯಂತೆ ಸುತ್ತಲೂ ಬಲುಬೇಗ ಪಸರಿಸುತ್ತದೆ. ಆ ವಾಸನೆ ಮೂಗಿಗೆ ತಗಲುದ ಕೂಡಲೇ ನಿಜವಾದ ಭಿಕ್ಷುಕರೂ ಸೋಗಿನ ಭಿಕ್ಷುಕರೂ ನಾತಹಿಡಿಯುತ್ತ ಹೊಗೆಯ ಮನೆಗೆ ಬಂದು ಸೇರುವುದು ವಾಡಿಕೆ. ಬಂದು, ಬೇಡುವುದನ್ನೆಲ್ಲ ಬೇಡುವುದು! ಇದ್ದುದನ್ನು ಇಲ್ಲವೆನ್ನದೆ ಆನಂದದಿಂದ ಇಚ್ಛಾಪೂರ್ತಿ ಮಾಡಿದರೆ ಮಾಸ್ತರರಿಗೆ ಸಮಾ

ಧಾನ. ನಿಲ್ದಾಣದಲ್ಲಿ ಯಾವಾಗಲೂ ಯಾರಾದರೂ ಬಂದು ತಂಗಿರುವಂತೆ ಇವರಲ್ಲಿಯೂ ಯಾವಾಗಲೂ ಅತಿಥಿಗಳು ಇದ್ದೇ ಇರುತ್ತಿದ್ದರು. ಒಮ್ಮೆ ಒಬ್ಬ ಜಂಗಮನು ತನ್ನ ಹೆಂಡತಿಯನ್ನು ಬೀಳಿಸಲಿಕ್ಕೆ ಅಡ್ಡಿಯಾಗಿದ್ದರಿಂದ ಕೆಲವು ರೂಪಾಯಿಗಳನ್ನೂ ಒಂದು ಉಂಚೀ ಸೀರೆಯನ್ನೂ ಕೊಡಿರೆಂದು ಕೇಳಿದನು. ಹೂಸ್ತರರ ಕೈಯಲ್ಲಿ ಆಗ ಏನೂ ಇರದಿದ್ದರೂ ಹೇಗೋ ಮಾಡಿ ಆ ಜಂಗಮನ ಇಚ್ಛಾಪೂರ್ತಿಗೈದು ಕಳಿಸಿದರು. ನಮ್ಮಲ್ಲಿ ದಾನ ಗಳಿಗೂ ಭಿಕಾರಿಗಳಿಗೂ ಹದಬೆದೆಯೇ ಇಲ್ಲ. ಏನು ಬೇಡಬೇಕು, ಏನು ಬೇಡಬಾರದು ಇದು ಗೊತ್ತೇ ಇಲ್ಲ.

ಹಂಪೆ, ಉಳವಿ, ಗೋಕರ್ಣ ಮೊದಲಾದ ಪುಣ್ಯಸ್ಥಳಗಳಿಗೂ ಹೋಗಿ ಬಂದರು. ಎಷ್ಟೋ ಸಾರೆ ಕಲ್ಲುಮುಳ್ಳುಗಳಲ್ಲಿ ಬರೆಗಾಲಿಸಿಂದ ನಡೆಯುವ ಪ್ರಸಂಗವೂ ಎರಡು ಮೂರು ದಿನ ಉಪವಾಸವಿರುವ ಪ್ರಸಂಗವೂ ಬರು ತ್ತಿತ್ತು. ನಡೆದು ಪ್ರವಾಸ ಮಾಡಿದರೇ ಸೃಷ್ಟಿಸೌಂದರ್ಯವು ನೋಡಲಿಕ್ಕೆ ದೊರೆತು ಆನಂದವೂ, ದೇವರಲ್ಲಿ ಪೂಜ್ಯಭಾವವೂ ಬೆಳೆಯುತ್ತವಲ್ಲವೇ ?

---

# ೫. ಅಧ್ಯಾತ್ಮಾನುಭವ

“ಶಾಸ್ತ್ರಗಳನ್ನು ಕೇಳಿ ಅದರಂತೆ ಆಚರಿಸಿ, ವಿವೇಕದಿಂದೊಡಗೂಡಿದ ನಿನ್ನ ಬುದ್ಧಿಯು ಯಾವಾಗ ಏಕವಾಗಿ ನಿಲ್ಲುವದೋ ಆಗ ಜ್ಞಾನವೆಂಬ ಆತ್ಮಸಾಕ್ಷಾತ್ಕಾರವನ್ನು ಹೊಂದುತ್ತೀ” —ಭಗವದ್ಗೀತೆ.

ಮನುಷ್ಯನು ಯಾವ ಪೌರುಷವನ್ನು ಮಾಡಲಿಕ್ಕಾದರೂ ಶರೀರ ಬುದ್ಧಿ ಎರಡೂ ಸರಿಯಾದ ರೀತಿಯಲ್ಲಿ ಬೆಳೆಸಲ್ಪಟ್ಟಿರಬೇಕು. ಇವುಗಳಲ್ಲಿ ಒಂದು ಕಿರಿದಾದರೆ ಮನುಷ್ಯನು ಕುಂಟನಾದನೆನ್ನಬೇಕು. ‘ದೃಢವಾದ ಶರೀರವೂ ತೀಕ್ಷ್ಣವಾದ ಬುದ್ಧಿಯೂ ಇದ್ದರೆ ಜಗತ್ತೇ ಬಂದು ಕಾಲಿಗೆರಗುವದು’ ಎಂಬ ಅನುಭವವನ್ನುಂಡ ಶ್ರೀವಿವೇಕಾನಂದರು ಹೇಳುವರು. ಅದು ಯಥಾರ್ಥವೇ ಇದೆ. ಅಧ್ಯಾತ್ಮದಲ್ಲಾದರೋ ಗಟ್ಟಿಯಾದ ಶರೀರವು ಬೇಕು. ಮನಸ್ಸನ್ನು ಸ್ಥಿರವಾಗಿಟ್ಟುಕೊಳ್ಳುವುದಕ್ಕೂ ಸದೃಢವಾದ ಶರೀರವು ಬೇಕಲ್ಲವೇ? ‘ದುರ್ಬಲವಾದ ಶರೀರವುಳ್ಳವನಿಗೆ ಆತ್ಮಸಾಕ್ಷಾತ್ಕಾರವಾಗುವದಿಲ್ಲ’ (ವಿವೇಕಾನಂದ) ದುರ್ಬಲವಾದ ಶರೀರದಲ್ಲಿ ಸಬಲವಾದ ಮನಸ್ಸು ಹೇಗಿದ್ದೀತು? ಅಧ್ಯಾತ್ಮದಲ್ಲಲ್ಲದೆ ಐಹಿಕ ವಿಚಾರದಲ್ಲಿಯಂತೂ ಶರೀರಬಲವಿಲ್ಲದೆ ಸಾಗುವುದೇ ಇಲ್ಲ. ಜನಾಂಗದ ಸೌಭಾಗ್ಯವು ಬೆಳೆಯಬೇಕಾದರೆ ಆ ಜನಾಂಗದ ಜನರೆಲ್ಲ ಜಟ್ಟಿಯಂತೆ ಗಟ್ಟಿಯಾಗಬೇಕು. ಒಂದಿಷ್ಟು ಆಹಾರ ಬದಲಾದರೆ ಇಲ್ಲವೆ ಒಂದು ತುತ್ತು ಕೂಳು ಹೆಚ್ಚುಕಡಿಮೆಯಾದರೆ ನೆಲಹಿಡಿಯುವ ಬ್ರಹ್ಮಚಾರಿಗಳು ನಮಗೆ ಬೇಕಿಲ್ಲ. ಕಲ್ಲು-ಬಂಡೆಗಳಂತೆ ಕಷ್ಟನಷ್ಟ ತಿಂದು ಬಂದುದಕ್ಕೆ ಎದೆಗೊಡುವ ಕನಗಗಳು ಬೇಕು. ಆದರೆ ಬುದ್ಧಿಯಿಲ್ಲದ ಇಂಥ ಶರೀರಗಳ ಉಪಯೋಗವಿಲ್ಲ. ಶರೀರವನ್ನು ಬೆಳೆಸುವುದೇ ನಮ್ಮ ಗುರಿಯಾಗಕೂಡದು. ಅದು ಜೀವನಕ್ಕೆ ಸಹಾಯ ಮಾತ್ರ ಆಗುತ್ತಿರಬೇಕು. ರೇವಣಸಿದ್ದಪ್ಪನವರು ಕಾಲೇಜಿಗೆ ಹೋಗುವ ವರೆಗೆ ಬಡತನವಿದ್ದುದರಿಂದಲೂ ಅಭ್ಯಾಸದಲ್ಲಿಯೇ ತೊಡಗುವ ಒಲವಿದ್ದುದರಿಂದಲೂ ಅಶಕ್ತವಾಗಿದ್ದರು. ಕಾಲೇಜನಲ್ಲಿ ವ್ಯಾಯಾಮಕ್ಕೆ ಎಳಸಿದವರು ಕಡೆತನಕ ಅದನ್ನು ಮಾಡುತ್ತಲೇ ಬಂದರು. ಅಧ್ಯಾತ್ಮವಿಚಾರದಲ್ಲವರು ಮುಳುಗಿದ್ದರೂ ವ್ಯಾಯಾಮವನ್ನು ಮರೆಯಲಿಲ್ಲ. ಇವರು ೩೩ನೇ ವಯಸ್ಸಿಗೆ ಐದುವರೆ ಫೂಟು ಎತ್ತರವಾಗಿದ್ದರು.

ಎದೆಯಳತೆಯು ಮೂವತ್ತೈದುವರೆ ಇಂಚು. ರೇವಣಸಿದ್ಧಪ್ಪನವರು ಮೂವತ್ತೈದು ವಯಸ್ಸಿನಲ್ಲಿಯೂ ಇಪ್ಪತ್ತೈದು ವಯಸ್ಸಿನವರಂತೆ ಕಾಣಿಸುತ್ತಿದ್ದರು. ಅವರು ವ್ಯಾಯಾಮವನ್ನಲ್ಲದೆ ಪ್ರಾಣಾಯಾಮವನ್ನು ಸಹ ಮಾಡುತ್ತಿದ್ದರು. ಆಸನಪ್ರಾಣಾಯಾಮಾದಿಗಳಿಗೆ ಚಲೋ ಆಹಾರ ಬೇಕು. ನಮ್ಮ ಬಡತನಕ್ಕದು ನಿಲುಕದು. ಅಂಥದು-ಇಂಥದು ತಿಂದು ಮಾಡಿದರೆ ಶರೀರಕ್ಕೆ ಭಯಂಕರ ದುಷ್ಪರಿಣಾಮವಾಗುತ್ತದೆ. ಚಹ, ಬೀಡಿ ಮೊದಲಾದ ಖರ್ಚಿನ ದುಂದುಗಾರಿಕೆಯ ಹಣವನ್ನು ಶರೀರಹಿತವಾಗುವ ಸತ್ವವುಳ್ಳ ಆಹಾರಗಳಿಗೆ ಖರ್ಚುಮಾಡಿದರೆ ಬಡತನದಲ್ಲಿಯೇ ಬಡಿವಾರ ವಾಗುವದಲ್ಲವೇ? ಹೊಲಮನೆ ಮಾರಿ, ಸಾಲಮಾಡಿಕೊಂಡು ಶರೀರವನ್ನು ಬೆಳೆಸುವುದು ನಮಗೆ ಬೇಕಿಲ್ಲ. ಹಾಸಿಗೆಯಿದ್ದಷ್ಟರಲ್ಲೇ ರಾಜನಾಗಿ ಬೇಕಾದಂತೆ ಹೊರಳಾಡಲಿ.

ದೇವನನ್ನು ಅರಿಯುವುದಕ್ಕೆ ಜಾತಿ, ವಯಸ್ಸು, ಉದ್ಯೋಗ ಮುಂತಾದವುಗಳ ಭೇದವಿಲ್ಲ. "ದೇವರು, ಧರ್ಮ, ಮೊದಲಾದವುಗಳು ನಮಗೇಕೆ? ನಾವೇನು ಸನ್ಯಾಸಿಗಳೇ? ಅದು ಯಾರಿಗೆ ಹೇಳಿದೆಯೋ ಅವರೇ ಮಾಡಲಿ." ಎನ್ನುವ ವಿಚಾರಗಳಿಗೂ ನಮ್ಮಲ್ಲೇನು ಕಡಿಮೆಯಿಲ್ಲ ಅಧ್ಯಾತ್ಮದ ಗುತ್ತಿಗೆಯು ವೈರಾಗಿಗಳಿಗಷ್ಟೆ ಕೊಟ್ಟಿದ್ದೆಂತಲ್ಲ. ಅಧ್ಯಾತ್ಮದ ಹಾದಿಗೆ ಬಡತನವನ್ನು ನೋಡಬೇಕಿಲ್ಲ. ಪಾರತಂತ್ರ್ಯದ ಮೂಗಳುಕಿಗೆ ಬೆಚ್ಚುವ ಕಾರಣವಿಲ್ಲ. ನಮಗೆ ಸ್ವರಾಜ್ಯ, ಭೌತಿಕಜ್ಞಾನ ಮುಂತಾದವುಗಳು ಆಗ ಬೇಕಿದ್ದರೂ ಆಧ್ಯಾತ್ಮದ ಉನ್ನತಿಯಿಂದಲೇ ಎಂದು ದೊಡ್ಡ ದೊಡ್ಡ ತಲೆಯವರಿಗೆ ಅನಿಸಿಬಿಟ್ಟಿದೆ. ನಮ್ಮ ಸ್ಥಿತಿಯು ನಿಜವಾಗಿ ಸುಧಾರಿಸಬೇಕಿದ್ದರೆ, ನಮ್ಮ ಸುಧಾರಣೆಯು ಗಟ್ಟಿಯಾದ ತಳಹದಿಯ ಮೇಲೆ ನಿಲ್ಲಬೇಕಾಗಿದ್ದರೆ ನಮ್ಮ ಆಧ್ಯಾತ್ಮಿಕ ಪುನರುಜ್ಜೀವನವು, ನಮ್ಮ ಬ್ರಹ್ಮವಿದ್ಯೆಯ ಪುನರುದ್ಧಾರವಾಗುವುದು ಅವಶ್ಯ.

ಬೇಕಾದುದನ್ನು ಬೇಕಾದಷ್ಟು ಓದಿದರೇನು? ಅದರಿಂದ ಒಂದು ಅಧಿಕಾರ ಪಡೆಯಬಹುದು; ಕೀರ್ತಿ ಪಡೆಯಬಹುದು: ಗ್ರಂಥಕಾರನಾಗ ಬಹುದು: ಅವನು ಸತ್ತ ಮೇಲೆ ಬಹಳವಾದರೆ ಸ್ಮಾರಕ ಮಾಡಿಯಾರು. ಆದರೆ ತನ್ನ ಹಾದಿಯು ಎಷ್ಟು ಕ್ರಮಿಸಲ್ಪಟ್ಟಿತು? ಕರೆದರೂ ಬಾರದಿರುವ ಹುಡುಗನು ಆಟ ಮುಗಿದ ಮೇಲೆ 'ಅವ್ವಾ' ಎಂದು ಬರುವಂತೆ ಮನುಷ್ಯನು ಜಗತ್ತಿನ ಕಾರ್ಯಗಳನ್ನು ಮುಗಿಸಿ ಇಲ್ಲವೆ, ಅವುಗಳಿಗೆ ಬೇಸರಪಟ್ಟು

ಪರಮಾತ್ಮನ ಹಾದಿ ಹಿಡಿಯುವುದು ಸ್ವಾಭಾವಿಕ. ಹಿಡಿಯದವರ ಲೋಕದ ಕಾರ್ಯಗಳು ಮುಗಿದಿಲ್ಲವೆನ್ನಬೇಕು, ಅವು ಇನ್ನೂ ಸಾಕಾಗಿಲ್ಲವೆನ್ನಬೇಕು.* ನಮ್ಮ ದೇಶದಲ್ಲಿ ಉಳಿದ ದೇಶದವರಿಗಿಂತ ಈ ಹಾದಿಗೆ ಬರುವುದು ಹೆಚ್ಚು. ನಮ್ಮ ದೇಶದ ನಾಡಿಯೇ ಅಧ್ಯಾತ್ಮ; ನಮ್ಮ ದೇಶದ ಬೆನ್ನೆಲುಬೇ ಧರ್ಮದೇವರು. "ಭಾರತೀಯರು ತಮ್ಮನ್ನು ಇತರರು ಲೂಟಿಮಾಡಿದರೂ ತಮ್ಮನ್ನು ಇತರರು ಒರಟರೆಂದು ಕರೆದರೂ ತೃಪ್ತರಾಗಿ ಅದಕ್ಕೆ ಪ್ರತಿಫಲರೂಪವಾಗಿ ಪರಮಾತ್ಮನ ಮಹಿಮೆಯನ್ನೂ ಮನುಷ್ಯ ಸ್ವಭಾವದ ರಹಸ್ಯವನ್ನೂ ಹೊರಪಡಿಸಿ ಅಂತರಾತ್ಮನ ಮುಚ್ಚಿರುವ ಕಣ್ಣು ತೆರೆದು ಅವನ ಪ್ರಕಾಶವನ್ನು ಪ್ರಪಂಚಕ್ಕೆಲ್ಲ ಸಾರಲು ಇಚ್ಛಿಸುತ್ತಾರೆ."(ವಿವೇಕಾನಂದ) ಸ್ವಾಭಾವಿಕವಾಗಿರುವ ಈ ಹುಚ್ಚು ನಮ್ಮ ರೇವಣಸಿದ್ಧಪ್ಪನವರಿಗೂ ಹತ್ತಿತು. ಸಾಮಾನ್ಯರಲ್ಲಿರುವ ಧರ್ಮಾಂಧತೆಯು ಇವರಲ್ಲಿಯೂ ಮೊದಮೊದಲಿಗಿತ್ತು. ಶಿವನೇ ಸರ್ವೋತ್ತಮನೆನ್ನುವುದು ಇವರ ಹಟ. ಒಬ್ಬೊಬ್ಬರು ತಂತಮ್ಮ ನಿಷ್ಠೆಯ ದೇವರುಗಳು ಶ್ರೇಷ್ಠರೆಂದುಕೊಳ್ಳುವುದು ಒಳ್ಳೆಯದು. ಆದರೆ ಮತ್ತೊಬ್ಬರ ಶ್ರದ್ಧೆಯ ದೇವರು ಕನಿಷ್ಠ, ಕೀಳು ಎಂದರೆ ಎಷ್ಟೆಷ್ಟೋ ಅನಾಹುತಗಳಾಗುತ್ತವೆ. ನಿಜವಾದ ಧರ್ಮಬುದ್ಧಿಯು ಜಾಗ್ರತವಾದೊಡನೆ ಈ ಜೊಳ್ಳು ವಿಚಾರಗಳೆಲ್ಲ ಹಾರಿಹೋಗುತ್ತವೆ. ಅಲ್ಲಿಯ ವರೆಗೆ ಈ ಗುದ್ದಾಟದ ಗತಿಯೇನು? ದೇವರು ಒಬ್ಬನೇ ಎಂದೂ, ಆತನಿಗೇ ಬೇರೆ ಬೇರೆ ಮತದವರು ಬೇರೆ ಬೇರೆ ಹೆಸರುಗಳನ್ನು ಕೊಟ್ಟಿರುವರೆಂದೂ ಬುದ್ಧಿಯು ಜನರಲ್ಲಿ ಮೊಳೆಯಬೇಕು. ಕುರುಡರು ಆನೆ ನೋಡಿದಂತೆ ನಮ್ಮಲ್ಲಿಯ ಧರ್ಮಾಂಧರು ದೇವರನ್ನು ಬೇರೆಬೇರೆಯಾಗಿ ಕಲ್ಪಿಸಿಕೊಂಡು ಗುದ್ದಾಡುತ್ತಾರೆ. ಈ ಕುರುಡುತನವನ್ನು ತೆಗೆದುಹಾಕಿದ್ದಲ್ಲದೆ ಜಾತಿ ಜಗಳಗಳು ಕಡಿಮೆಯಾಗಲಾರವು.

ನಾವು ಪಾಪಿಷ್ಠರಿರಲಿ, ದುಷ್ಕರ್ಮಿಗಳಿರಲಿ ಪಶ್ಚಾತ್ತಾಪಪಟ್ಟರೆ ದೇವರು ನಮ್ಮನ್ನು ಕ್ಷಮಿಸಲಾರನೇ? ಪಶ್ಚಾತ್ತಾಪಪಟ್ಟವರಿಗೆ ಕ್ಷಮೆಯನ್ನು ಕೊಡದೆ ಕಠಿಣ ಶಿಕ್ಷೆಯನ್ನೇ ಕೊಡುವನೇ? ಇಷ್ಟೆಲ್ಲ ಕೆಟ್ಟ ಕೆಲಸಗಳನ್ನು ಮಾಡಿ ಇನ್ನು ಯಾವ ಮೋರೆಯಿಂದ ದೇವರನ್ನು ಮೊರೆಹೊಗಬೇಕು? ಜನರು ಏನೆಂದಾರು?

* "ಮರ್ತ್ಯಲೋಕದಲ್ಲಿ ಮರಣವನ್ನು ಮಾಡಲಿಸಿ ಪರಮಾನಂದವನು ಪಡೆಯುವುದೇ ನಮ್ಮ ಧ್ಯೇಯವು. ನಾವು ನಮ್ಮ ಕೆಲಸವನ್ನು ಮಾಡಿ, ಈ ಜನ್ಮದಲ್ಲಿ ಪವಿತ್ರವಾದ ಪರಮಾನಂದವನ್ನು ಸಾಯುವ ವರೆಗೆ ಪಡೆದರಾಯಿತು."

ಎಂದೆನ್ನುವುದು ಸರಿಯಲ್ಲ. ನಿಜವಾಗಿ ಇಂಥ ವಿಚಾರಗಳಿಂದಲೇ ಅನೇಕರು ಕಾಲುಬಿಟ್ಟು ಕುಣಿಯುತ್ತಿರುವುದು. ಪರಮಾತ್ಮನಲ್ಲಿ ದೃಢವಾದ ಭಕ್ತಿಯನ್ನಿಟ್ಟರೆ ನಮ್ಮ ಪಾಪಗಳೆಲ್ಲ ಕರಗಿಹೋಗುತ್ತವೆಂಬುದು ಅವರಿಗೆ ಹೇಗೆ ಗೊತ್ತಾಗಬೇಕು? ಶ್ರೀರಾಮಕೃಷ್ಣ ಪರಮಹಂಸರು ಕೂಡ–'ಭಗವಂತನಲ್ಲಿ ದೃಢವಾದ ವಿಶ್ವಾಸವುಳ್ಳವನು ಗೋ-ಬ್ರಾಹ್ಮಣ-ಸ್ತ್ರೀ-ವಧೆಗಳನ್ನು ಮಾಡಿದ್ದರೂ ಆ ವಿಶ್ವಾಸ ಬಲದಿಂದ ಪಾಪಗಳ ದೆಶೆಯಿಂದ ಬಿಡುಗಡೆ ಹೊಂದುತ್ತಾನೆ. ಅಂಥವನು ಇನ್ನು ಮುಂದೆ ನಾನು ಇನ್ನಾವ ಪಾಪವನ್ನೂ ಮಾಡುವುದಿಲ್ಲವೆಂದು ಹೇಳಿಬಿಟ್ಟರೆ ಸಾಕು" ಎಂದು ಅಭಯಕೊಟ್ಟಿದ್ದಾರೆ. ಪಶ್ಚಾತ್ತಾಪವೇ ಪ್ರಾಯಶ್ಚಿತ್ತವೆಂದು ಹಿರಿಯರು ಹೇಳಿದ್ದನ್ನು ಕೇಳಿಲ್ಲವೇ? ಮ. ಗಾಂಧಿಯವರ ಅನುಭವವಾದರೂ ಹೀಗೆಯೇ ಇರುತ್ತದೆ. "ನಮ್ಮನ್ನು ಕ್ಷಮಿಸುವ ಅಧಿಕಾರವಿರುವಾತನಿಗೆ ನಮ್ಮ ತಪ್ಪನ್ನು ಮುಚ್ಚುಮರೆಯಿಲ್ಲದೆ ಒಪ್ಪಿಕೊಂಡು ಪುನಃ ಆ ರೀತಿ ಅಪರಾಧವನ್ನು ಮಾಡುವದಿಲ್ಲವೆಂದು ಪ್ರತಿಜ್ಞೆ ಮಾಡುವುದು ಶುದ್ಧತಮವಾದ ಪ್ರಾಯಶ್ಚಿತ್ತ!'' ಹಾಗೆ ಮಾಡಿ ಜನ್ಮೋದ್ಧಾರ ಮಾಡಿಕೊಂಡ ಮಹನೀಯರ ಉದಾಹರಣಗಳು ಹೇರಳವಾಗಿರುವವು. ಪುಂಡಲೀಕನು ತನ್ನ ತಾಯಿ ತಂದೆಗಳನ್ನು ಛಲಿಸಿದ್ದಕ್ಕೆ ತಪ್ಪುತಪ್ಪು ಅನಿಸಿ ತಿರುಗಿ ಅವರ ಸೇವೆಯನ್ನು ಭಕ್ತಿಯಿಂದ ಮಾಡಿದ್ದಕ್ಕೆ ಅದೆಂಥ ಅಜರಾಮರನಾದನು! ದೇವರ ನಾಮೋಚ್ಚಾರಣೆ ಮಾಡುವ ಮೊದಲು ಅವನ ಹೆಸರನ್ನೇ ತೆಗೆದುಕೊಳ್ಳುವಷ್ಟು ದೇವಪ್ರಿಯನಾಗಿ ಹೋಗಲಿಲ್ಲವೇ? "ಪುಂಡಲೀಕ ವರದ ಹರಿ ವಿಠ್ಠಲ!!'' ತೆಲುಗು ನಾಡಿನಲ್ಲಿ ವೇಮಣ್ಣನೆಂಬವನು ಜ್ಞಾನಿಯಾಗಿ ಮಹರ್ಷಿಯಂತೆ ಬಾಳಿಹೋದನು. ಅಂಥವನ ಪೂರ್ವಚರಿತ್ರೆಯನ್ನು ಕೇಳಿದರೆ ಭಯಂಕರ ವ್ಯಭಿಚಾರಿ! ಪಶ್ಚಾತ್ತಾಪಿಗಳು ಭಜನ-ಈಶಸ್ತವನ ಮೊದಲಾದವುಗಳಿಂದ ಪಶ್ಚಾತ್ತಾಪವನ್ನು ಪ್ರಕಟಮಾಡುವರು. ಸಂಕಟ ಸಮಯದಲ್ಲಿಯೂ ಮಾಡಬಾರದ್ದನ್ನು ಮಾಡಿದ ಪ್ರಸಂಗದಲ್ಲಿಯೂ ದೇವರೇ ಯೆಂದು ಹಲಬುವುದು ಆಗಾಗ ಕೇಳಿಬರುತ್ತದೆ. ಅಪರಾಧಿಗಳಿಗೆ ಅಭಯ ಕೊಡುವ ದೇವರು, ನಿರಪರಾಧಿಗಳ ಭಜನಾದಿಗಳಿಗೆ ಕರುಣಿಸಲಿಕ್ಕಿಲ್ಲವೇ? "ಕಲಿಯುಗದಲ್ಲಿ ಭಕ್ತಿಯೋಗ, ಭಗವಂತನ ನಾಮೋಚ್ಚರಣೆ, ಗುಣಗಾನ ಮತ್ತು ಪ್ರಾರ್ಥನೆಯನ್ನು ಮಾಡಬೇಕು. ಭಕ್ತಿಯೋಗವೇ ಯುಗಧರ್ಮ" (ರಾ.ಪ.ಹಂ.) ಭಕ್ತಿಯುತರಾಗಿ ಭಜನೆಯನ್ನು ಮಾಡಿದರೆ ಅಥವಾ

ಬಿಟ್ಟರೆ ದೇವರು ಒಲಿದೇ ಒಲಿಯುವನು ಅದೇ ಇಲ್ಲದಿದ್ದರೆ ಬಸವ, ರಾಮ, ಕೃಷ್ಣ ಮೊದಲಾದ ದೇವಪುರುಷರು ಜೀವದಿಂದ ಇದ್ದರೂ ನಾವು ಕಲ್ಲೊಡೆಯುದಕ್ಕೆ ಕಿವಿಗೊಡುವದಿಲ್ಲ. ಭಜನೆ–ನಾಮಸ್ಮರಣೆಗಳಿಂದ ಏನಿಲ್ಲೆಂದರೂ ಮನಸ್ಸು ಸಮಾಧಾನವಾಗುತ್ತದೆ. ಅದನ್ನು ಯಾರಾದರೂ ಅನುಭವ ಪಡೆದು ನೋಡಬಹುದಾಗಿದೆ. ಜನಕ ಮಹಾರಾಜನು ಪ್ರಪಂಚದ ಒಂದು ದೊಡ್ಡ ಗುದ್ದಿಯನ್ನು ಅಂದರೆ ರಾಜ್ಯಭಾರವನ್ನು ಕಟ್ಟಿಕೊಂಡಿದ್ದರೂ ಮಹರ್ಷಿಯೆನಿಸಿಕೊಂಡಿದ್ದೇಕೆ? ಅವನು ಸಮಯ ದೊರೆತಾಗ ನಿರ್ಜನ ಪ್ರದೇಶಕ್ಕೆ ಹೋಗಿ ದೇವರಲ್ಲಿ ಮೊರೆಯಿಡುತ್ತಿದ್ದನಂತೆ. ಚಿತ್ತವೊತ್ತಟ್ಟಿಗೆ ಚಿಪ್ಪಾಟಿಯೊತ್ತಟ್ಟಿಗೆ ಹೀಗೆ ಭಜನೆ ಧ್ಯಾನ ಮುಂತಾದವುಗಳನ್ನು ಮಾಡುವವರೆಷ್ಟು ಮಂದಿಯಿಲ್ಲ? ಮಾಡಿ ಮುಟ್ಟಿ ಕೂಲಿ ಕೇಳಲಿಕ್ಕೆ ಮೋರೆಯಿಲ್ಲದವರು ಇವರೇ! 'ಇಷ್ಟು ಮಾಡಿದರೂ ಆ ಕಿಡಿಗೇಡಿ ದೇವರು ನಮ್ಮನ್ನು ಏನು ಚಂದ ಇಟ್ಟಿದ್ದಾನೆ' ಎಂದು ನರಳುವುದು ಬೇರೆ. ಇಂಥ ಕಟ್ಟ–ಖಗ್ರಾಸ ಕಲಿಯುಗದಲ್ಲಿಯೂ ದೇವರನ್ನು ಮೂರೇ ದಿನದಲ್ಲಿ ಪಡೆಯಬಹುದಂತೆ! ಆದರೆ ಶ್ರೀ ರಾಮಕೃಷ್ಣ ಪರಮಹಂಸರು ಹೇಳುವ ರೀತಿಯನ್ನು ಅನುಸರಿಸಬೇಕು. "ಜನರಿಗೆ ಲೋಕವಿಷಯದಲ್ಲಿ ಎಷ್ಟು ಆಸೆಯಿದೆಯೋ, ತಾಯಿಗೆ ಮಕ್ಕಳ ಮೇಲೆ ಎಷ್ಟು ಅಕ್ಕರತೆಯಿದೆಯೋ, ಹೆಂಡತಿಗೆ ಗಂಡನ ಮೇಲೆ ಎಷ್ಟು ಅನುರಾಗವಿದೆಯೋ ಆ ಮೂರೂ ಬಗೆಯ ಅಭಿಮಾನವನ್ನು ಭಗವಂತನಲ್ಲಿಟ್ಟರೆ ಅವನನ್ನು ಕಾಣಬಹುದು." ಅಂದರೆ ನಾವು ದೇವರ ತಾಯಿಯೂ ಹೆಂಡತಿಯೂ ಆಗಬೇಕು. ರೇವಣಸಿದ್ಧಪ್ಪನವರು ಭಜನೆ, ನಾಮಸ್ಮರಣೆ ಮೊದಲಾದವುಗಳನ್ನು ಚಿಕ್ಕಂದಿನಿಂದಲೇ ಆರಂಭಿಸಿದ್ದರೆಂದು ಹಿಂದೆ ಹೇಳಿದೆ. ಭಜನೆ, ಕೀರ್ತನೆ ಮೊದಲಾದವುಗಳು ನಡೆದಾಗ ಕೇಳುತ್ತ ಏಕಚಿತ್ತರಾಗಿ ತಲ್ಲೀನರಾಗಿಬಿಡುವರು.

ಇವರು ಇಷ್ಟು ದೇವಭಕ್ತರಾಗಿದ್ದರೂ "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂದು ಪದದಲ್ಲಿ ಗಂಟುಹಾಕಿಕೊಂಡಂತೆ ತೋರುತ್ತದೆ. ಅದಕ್ಕಾಗಿ ಮಹಾಮಹಾ ಸ್ವಾಮಿಗಳನ್ನು ದರ್ಶನ ಮಾಡುತ್ತಿದ್ದರು.† ಬಬಲೇಶ್ವರದ ಶ್ರೀಮನ್ನಿರಂಜನ ಶಾಂತವೀರ ಸ್ವಾಮಿಗಳನ್ನು

† ಬ್ರಹ್ಮಪದವಿಯನೊಲ್ಲೆ । ವಿಷ್ಣುಪದವಿಯನೊಲ್ಲೆ । ರುದ್ರಪದವಿಯನೊಲ್ಲೆ । ನಾನು ಮತ್ತಾವ ಪದವಿಯನೊಲ್ಲೆನಯ್ಯಾ । ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರ ಪಾದವನಂದಿಪ್ಪ ಮಹಾಪದವಿಯ ಕರುಣಿಸಯ್ಯಾ ॥ —ಶ್ರೀ ಬಸವಣ್ಣನವರು.

ಹೆಚ್ಚಾಗಿ ನಂಬಿದ್ದರೆಂದೂ ಅವರ ಮುಂದೆ ತಮ್ಮ ಹೊಟ್ಟೆಯೊಳಗಿದ್ದುದನ್ನೆಲ್ಲ ಬಿಚ್ಚಿ ಹೇಳುತ್ತಿದ್ದರೆಂದೂ ಕೆಳಗೆ ಅವತರಿಸಿದ ಎರಡು ಓಲೆಗಳಿಂದ ತಿಳಿಯ ಬಹುದಾಗಿದೆ.

೧. "…..ನಮ್ಮ ಹುಡುಗನ ಕೈಯಲ್ಲಿ ಬರಕೊಟ್ಟ ಮೊದಲನೇ ಪತ್ರಕ್ಕೆ ಉತ್ತರವನ್ನು ಹಾಕಲಿಕ್ಕೆ ಬಹಳೇ ಕಾಲವಿಲಂಬ ಮಾಡಿದ ಮಹಾ ಪರಾಧಕ್ಕೆ ಶ್ರೀಪಾದದಲ್ಲಿ ಕ್ಷಮಾಪಣೆಯನ್ನು ದೈನ್ಯೋಕ್ತಿಯಿಂದ ಯಾಚಿಸು ವೆನು. ಮಹಾಪಾದವು ತನ್ನ ಪ್ರೇರಣೆಯಿಂದ ಈಗ ತಮ್ಮ ದಾಸನನ್ನು ಶಿವಧ್ಯಾನನಿರತನನ್ನಾಗಿ ಮಾಡಿದ್ದೇನೋ ನಿಜವು. ಆದರೆ ಸಂತೋಷ ಪೂರ್ಣ ಮನಸ್ಸಿನಿಂದ ಶಿವಧ್ಯಾನರತನನ್ನಾಗಿ ಮಾಡಿಸಿಕೊಳ್ಳಲಿಚ್ಛಿಸದೆ, ಉದ್ವಿಗ್ನತೆಯಿಂದ ಕೂಡಿದ ಮನಸ್ಸಿನಿಂದ ಧ್ಯಾನರತನನ್ನಾಗಿ ಮಾಡಿಸಿ ಕೊಂಡಿದೆ. ಶ್ರೀಗಳವರ ಮನಸ್ಸಿನಲ್ಲಿ ಸಂಶಯವು ಬರಬಹುದು. ಈಗ ತಮ್ಮ ದಾಸನ ಮೇಲೆ ಮಹಾಪಾದವು ಒಂದು ಅತ್ಯಂತ ಕಠಿಣತಮವಾದ ವಿಷಮಸ್ಥಿತಿಯನ್ನು ತಂದುಬಿಟ್ಟಿರುವದು. ಇಂಥ ವಿಪತ್ತಿನೊಳಗಿಂದ ಪಾರಾಗಬೇಕಾದರೆ ಮಹಾಪಾದದ ಬೆಂಬಲವಿಲ್ಲದೆ ಆಗದು…..ಆ ಮಹಾ ಪತ್ತು ಯಾವುದೆಂಬುದನ್ನು ಪತ್ರದಲ್ಲಿ ತಿಳಿಸಲಿಕ್ಕಾಗುವದಿಲ್ಲವೆಂದೇ ಉತ್ತರ ವನ್ನು ತೀವ್ರಕೊಡದ ದೋಷಕ್ಕೆ ಗುರಿಯಾಗಬೇಕಾಯಿತು….ಈಗ ತಮ್ಮ ದಾಸನು ಶಿವಧ್ಯಾನಾಸಕ್ತನಾಗಿ ೩–೩ಕ್ಕಿ ತಿಂಗಳಾದವು. ಈ ಅವಧಿಯಲ್ಲಿ ಆ ಮಹಾವಿಪತ್ತು ಎಂಟಾಣೆ ಕಡಿಮೆಯಾದಂತೆ ಕಂಡುಬಂದಿದೆ…..ಇದೇನು ತಮ್ಮ ದಾಸನ ಭಕ್ತಿ ಪರೀಕ್ಷಾರ್ಥವಾಗಿ ಬಂದದ್ದೋ, ಪ್ರಾಕ್ಕರ್ಮ ಪ್ರಭಾವ ದಿಂದ ಬಂದದ್ದೋ ಮಹಾಪಾದಕ್ಕೇ ಗೊತ್ತು….ತೀವ್ರವಾಗಿ ಈ ವಿಪತ್ತಿ ನೊಳಗಿಂದ ಪಾರಾಗಲಿಕ್ಕೆ ತಮ್ಮ ಆಶೀಃಪತ್ರವನ್ನು ದಯೆಪಾಲಿಸಬೇಕಾಗಿ ಪ್ರಾರ್ಥಿಸುತ್ತೇನೆ….."

೨ "ಮನೆಯವರು ವಿಜಾಪುರದಿಂದ ಬಂದನಂತರ ಮಹಾಪಾದ ದರ್ಶನಕ್ಕೆ ಬರಬೇಕೆಂದು ಈ ದಾಸನ ಇಚ್ಛೆಯುಂಟು. ಇದನ್ನು ಕೊನೆ ಗಾಣಿಸುವಲ್ಲಿ ಶ್ರೀಗಳವರ ದಿವ್ಯಪಾದವೇ ಸಮರ್ಥವು. ಈ ಸಂಸಾರದಲ್ಲಿ ಸಕಲವೂ ಶಿವಾಜ್ಞೆಯಂತೆಯೇ ವರ್ತಿಸುತ್ತಿರುವದು. ಜೀವನ ಇಚ್ಛೆಯು ನಿಮಿತ್ತ ಮಾತ್ರ….."ನಂಬಲರಿಯರು ನಚ್ಚಲರಿಯರು, ಇವರಿಗೆ ಶಿವನೆಂತು ಮೆಚ್ಚುವನು? ನಂಬಿ ಕರೆದರೆ ಓ ಎನ್ನದಿರ್ಪನೇ ಶಿವನು?"….ಶ್ರೀಅರವಿಂದ

ಯೋಗಿಗಳಾದರೂ ' ನಾನು ಪರಮಾತ್ಮನ ಕೈಯೊಳಗಿನ ಬಡಿಗೆಯಂತಿರುವೆನು' ಎಂದಿದ್ದಾರೆ....ಹೀಗೆ ಜೀವನು ತನ್ನ ವ್ಯಕ್ತಿತ್ವವನ್ನು ಪೂರ್ಣಮರೆತು ಶಿವಭಾವದಲ್ಲಿ ಸದಾ ಸ್ಥಿತನಾಗುವುದೇ ಐಕ್ಯವೆಂತಲೂ ಮುಕ್ತಿಯೆಂತಲೂ ನಿರ್ವಾಣವೆಂತಲೂ ಹೆಸರು. ಇಂತಪ್ಪ ಆತ್ಮನಿವೇದನ ಭಕ್ತಿಯನ್ನು ಶ್ರೀಗಳವರು ತಮ್ಮ ಕೃಪಾಶಕ್ತಿಯಿಂದ ಈ ದಾಸನಿಗೆ ಕೊಡಬೇಕೆಂದು ಪ್ರಾರ್ಥನೆಯುಂಟು ...."

**ಮೂರು ಕಣ್ಣೀಶ್ವರನ ತೋರಿಕೊಡಬಲ್ಲ ಗುರು**
**ಬೇರದರೊಳೊಂದು ತೆರನಿಲ್ಲ । ಗುರು ಕರುಣ ।**
**ತೋರುವದು ಹರನ ಸರ್ವಜ್ಞ ॥**

ಇಂಥ ಮೇಲ್ತರದ ಗುರುವಿನ ಹಿಡಿದು, ವರ್ಣಮಾತ್ರಂ ಕಲಿಸಿದಾತಂ ಗುರು ಮೊದಲು ಮಾಡಿ ಸಾಮು-ಶಕ್ತಿಗಳನ್ನು ಕಲಿಸುವ 'ವಸ್ತಾದ'ನ ವರೆಗೆ ಎಲ್ಲರೂ ಗುರುಗಳೇ. ಅವರವರು ಕರುಣಿಸಿದ್ದುದರ ಬೆಲೆಯಂತೆ ಭಕ್ತರಾಗಿರೋಣ. ದಕ್ಷಿಣೆಗೆ ಧುನಿಹಾಕಿ ಕುಳ್ಳಿರುವ ಗುರುಗಳೂ, ಕೈಗಡ ರೂಪಾಯಿಗಳನ್ನೂ ಸುಗ್ಗಿಯ ಮೊದಲು ಜೋಳವನ್ನೂ ಕೊಡಸಿದ್ದರೆ ಬಹಿಷ್ಕಾರ ಹಾಕಿ ದಂಡ ಬೇಡುವ ಊರಗುರುಗಳೂ ತುಂಬಿದ್ದಾರೆ. ಜೋಗದವರ ಮನೆಗೆ ಜೋಗಕ್ಕೆ ಹೋದರೆ ನೀಡಬೇಕೇನು ಹೇಳಿರಿ. ಹಿಂಡಾನುಹಿಂಡು ಜಂಗಮರು ಗುರುವರ್ಗವೆನಿಸಿ ಕ್ಷಣಕ್ಷಣಕ್ಕೆ ಭೆಟ್ಟಿಯಾಗುತ್ತಿದ್ದರೂ ರೇವಣಸಿದ್ದಪ್ಪನವರು ಗುರುಗಳನ್ನು ಪಡೆಯುವುದಕ್ಕೆ ಅಷ್ಟೇಕೆ ಅಲೆಯುತ್ತಿದ್ದರು ? ಕೈಕಾಲಿಗೆ ಭಕ್ತಜನರಿದ್ದರೂ ಮಾಸ್ತರರಂಥವರು ಬಹಳವಾಗಿ ಸಿಗುವದಿಲ್ಲ. ಅಂದಮೇಲೆ ಯೋಗ್ಯ ಗುರುಗಳಾದ ಜಂಗಮರು ತಾನೇ ಹೇಗೆ ಸಿಕ್ಕಾರು ? ಅದಕ್ಕಂತಲೇ ಮಾಸ್ತರರು ಅಥಣಿಯ ಶ್ರೀಮನ್ನಿರಂಜನ ಮುರುಘಾರಾಜೇಂದ್ರರ ದರ್ಶನಕ್ಕೆಂದು ಎರಡು ಸಾರೆ ಕಾಲುನಡಿಗೆಯಿಂದ ಹೋದರು. ಶಿವಯೋಗಮಂದಿರಕ್ಕೆ ಹೋಗಿ ಹಾನಗಲ್ಲ ಕುಮಾರಸ್ವಾಮಿಗಳನ್ನೂ ಭೆಟ್ಟಿಯಾದರು. ಅನುಗ್ರಹಿಸಬೇಕೆಂದು ಕೆಲವು ಪ್ರಶ್ನೆಗಳನ್ನು ಸ್ವಾಮಿಗಳಿಗೆ ಕೇಳಿಕೊಂಡರು. ಸ್ವಾಮಿಗಳು ಕೊಟ್ಟ ಉತ್ತರದಿಂದ ಮಾಸ್ತರರಿಗೆ ಸಮಾಧಾನವಾಗಲಿಲ್ಲ. ನಿರಾಶೆಯಾದಂತೆ ಮಾಸ್ತರರ ಅಲೆದಾಟವಾದರೂ ಹೆಚ್ಚಾಗಹತ್ತಿತು. ' ಊರಿಂಗೆ ದಾರಿಯನು ಯಾರು ತೋರಿದರೇನು ? ' ಎಂದು ಭಾವಿಸಿಕೊಂಡು ಕೇಳಿಕೆಯಿದ್ದಲ್ಲೆಲ್ಲ ಸಂಚರಿಸಹತ್ತಿದರು. ಇಂಥದರಲ್ಲಿ

ಅವರಿಗೆ ತೊನ್ನುರೋಗವೂ ಅವರ ಪತ್ನಿಗೆ ಗಂಡುಮಾಲೆಯೂ ಆಗಿ ಕಾಡ ಹತ್ತಿದ್ದರಿಂದ ಅವರು ಅಧ್ಯಾತ್ಮದಲ್ಲಿ ಮುಂದಕ್ಕೆ ಕಾಲಿಡಲು ಅನುಕೂಲವೇ ಆಯ್ತೆನ್ನಬೇಕು. ರೋಗಿಯನ್ನು ಕಂಡಿದ್ದು, ಲಕ್ಷ್ಮೀಪುತ್ರನಾದ ಭಗವಾನ್ ಬುದ್ಧನಿಗೆ ವೈರಾಗ್ಯವನ್ನು ಹುಟ್ಟಿಸಿ ಮನೆಬಿಡಿಸಿತು. ಇರಲಿ. ಗುರುಗಳನ್ನು ಶೋಧಿಸಬೇಕೆಂದು ಮಾಸ್ತರರು ಗಾಣಗಾಪುರಕ್ಕೆ ಹೋದರು. ಅಲ್ಲಿ ದತ್ತಾತ್ರಯದೇವರು ಪ್ರಸಿದ್ಧ. ದೇವದರ್ಶನವನ್ನು ತೆಗೆದುಕೊಳ್ಳುತ್ತ ಎರಡು ಮೂರು ತಿಂಗಳು ಅಲ್ಲಿಯೇ ತಳವೂರಿದರು. ಅಲ್ಲಿದ್ದಾಗ ಅವರಿಗೆ ಅವೆಷ್ಟೋ ತೊಂದರೆಗಳೂ ಸಂಕಟಗಳೂ ಬಂದವು. ಅವುಗಳನ್ನವರು ಸಿಹಿ ಮಾಡಿ ನುಂಗಿದರು. ಆದರೂ ಮನಸ್ಸಿಗೆ ಶಾಂತಿಯಿಲ್ಲದೆ ಮತ್ತೊಂದು ಕಡೆಗೆ ಹೊರಟರು. ''ಈಶಪ್ರಾಪ್ತಿಯ ಹಾದಿಯನ್ನೊಮ್ಮೆ ಹಿಡಿದರೆ ಅವನು ನಿನ್ನ ಕೊರತೆಗಳನ್ನೆಲ್ಲ ತುಂಬಿಕೊಡುವನು. ಭಗವಂತನನ್ನು ಆಶ್ರಯಿಸಿ ದವರ ಭಯಗಳೆಲ್ಲ ಕರಗಿಹೋಗುತ್ತವೆ ಎಂಬ ಮಹರ್ಷಿ ಅರವಿಂದ ಘೋಷರ ಅಮರ ನುಡಿಯುಂಟು ಆರು ತಿಂಗಳು ರಜೆಪಡೆದು ಕಲಘಟಗಿ ತಾಲೂಕಿನ ಬೆಲವಂತರ ಎಂಬ ಹಳ್ಳಿಗೆ ಹೋದರು. ಆ ಹಳ್ಳಿಯಲ್ಲಿ ಒಬ್ಬ ಸ್ವಾಮಿಗಳು ಸುಪ್ರಸಿದ್ಧರಂತೆ. ಅಲ್ಲಿಯೇ ಆರು ತಿಂಗಳು ಇದ್ದು ಬಂದರು. ಅಲ್ಲಿ ಅವರು ದಾಸೋಹಕ್ಕೆ ಎರಡೂ ಹೊತ್ತು ಹತ್ತಿದಷ್ಟು ನೀರುಸೇದಿ ಹಾಕುವರು. ದನಕರುಗಳಿಗೆ ನೀರು ಜಗ್ಗಿ ಕುಡಿಸುವುದೂ, ಉಡುಗುವುದೂ ಅವರ ಕೆಲಸಗಳೇ ಆಗಿದ್ದವು. ಕೈಗೆ ಗುಳ್ಳೆಗಳೂ ಬಂದಿದ್ದವಂತೆ ! ಯಾವ ಕಾರ್ಯವನ್ನಾದರೂ ಮಾಡುವರು ಅದಕ್ಕೆ ಗುರುಸೇವೆಯನ್ನುವರಲ್ಲದೆ ಅದು ಕೀಳು, ಇದು ಮೇಲು ಅನ್ನುವರಲ್ಲ. ರಜೆ ಮುಗಿಯಬಂದರೂ ಊರಿಗೆ ಮರಳುವ ಲಕ್ಷಣ ಕಾಣಿಸಲಿಲ್ಲ. ಅವರ ಸ್ನೇಹಿತರು ಕೆಲವರು ಹೋಗಿ ಬಲುಮೆಯಿಂದ ಸ್ವಾಮಿಗಳ ಅಪ್ಪಣೆ ಪಡೆದು ಮಾಸ್ತರರನ್ನು ಕರ ಕೊಂಡು ಬಂದರು. ಆದರೆ ಗುರುದೇವನ ಅನುಗ್ರಹವಾಗಲಿಲ್ಲ. ಈ ಖೋಡಿತನಕ್ಕೆ ರೇವಣಸಿದ್ದಪ್ಪನವರಿಗೆ ಬಹಳ ದುಃಖವೆನಿಸಿತು. ಮತ್ತೊಮ್ಮೆ ಗುರುಶೋಧನೆಗಾಗಿಯೇ ಹಂಪಿಯ ಗುಡ್ಡಬೆಟ್ಟಗಳನ್ನು ಅಲೆದಾಡಿ ಸತ್ತು ಕೆಟ್ಟು, ಕಷ್ಟಪಟ್ಟು ಉಳಿದು ಬಂದರು. ಹಂಪಿಯ ಗುಡ್ಡಗಳಲ್ಲಿ ಮುನಿಗಳ ವಾಸ ವಿರಬಹುದೆಂದು ಬಗೆದು ಅಲ್ಲಿಗೆ ಹೋಗಿ ಅಲ್ಲಿಯ ಜನರಿಗೆ ಈ ಬಗೆಗೆ ಕೇಳ ಲಾಗಿ ಒಂದಾನೊಂದು ಕೊಳ್ಳದಲ್ಲಿ ಒಬ್ಬ ಸಾಧುವಿದ್ದುದು ಗೊತ್ತಾಯಿತು.

ಅವನ ಸಲುವಾಗಿ ಹೊರಟರು. ನಡುಗುಡ್ಡದ ನಿರ್ಜನಸ್ಥಾನದಲ್ಲಿ ಒಬ್ಬ ಸಾಧುವೇನೋ ಸಿಕ್ಕನಂತೆ. ಇವರು ಹತ್ತಿರಕ್ಕೆ ಹೋದರೂ ಅವನು ಕಣ್ಣೆತ್ತಿ ಸಹ ನೋಡದೆ ಇರಲು "ಅಹಾ! ಎಂಥಾ ಆತ್ಮಧ್ಯಾನರತ"ನೆಂದು ಇವರಿಗೆ ಹಿಗ್ಗು ಹಿಡಿಸದಾಯಿತು. ಎಷ್ಟೋ ಹೊತ್ತಿನ ಮೇಲೆ ಕಣ್ಣುತೆರೆದ ಕೂಡಲೇ ಇವರು ಶಿರಸಾವಂದಿಸಿ ಈ ದೀನನಿಗೆ ಕೃಪೆಮಾಡಬೇಕೆಂದು ಬೇಡಿಕೊಂಡರು. ಅದಕ್ಕೆ ಅವನು ಒಂದು ತುಟಿ ಎರಡು ಮಾಡದೆ ಕಣ್ಣುಮುಚ್ಚಿ ಬಿಟ್ಟನು. ಇವರಿಗೆ ಮತ್ತಿಷ್ಟು ಹಿಗ್ಗು. 'ಎಷ್ಟು ನಿಸ್ಪೃಹನಪ್ಪಾ ಇವನು' ಎಂದುಕೊಂಡರು. ತುಸು ಹೊತ್ತಿನ ಮೇಲೆ ಅವನು ಅಲ್ಲಿಂದೆದ್ದು ಮುಂದಕ್ಕೆ ಹೋಗಿ ಮತ್ತೊಂದು ಸ್ಥಳದಲ್ಲಿ ಕಣ್ಣುಮುಚ್ಚಿ ಕುಳಿತನಂತೆ. ಆಗ ಆತ್ಮಾನಂದದಿಂದ ಇವರೂ ಅವನ ಹಿಂದೆ ಹೋಗಿ ಅಲ್ಲಿಯೇ ಕುಳಿತರು. ಮುಂದೆ ತುಸು ಹೊತ್ತಿನಲ್ಲಿಯೇ ಅವನು ಕಣ್ದೆರೆಯಲು ಇವರು ಮತ್ತೆ ಅಡಿಗಳಿಗೆರಗಿ ಬಿನ್ನವಿಸಿದರು. ಆದರೂ ಅವನು ಕಿವಿಗೊಡದೆ ಹತ್ತಿರದಲ್ಲಿದ್ದ ಒಂದು ಗುಡಿಯೊಳಗೆ ಹೊಕ್ಕನು. ಇವರು ಅಲ್ಲೇ ನಿಂತುಕೊಂಡರು. ಹೊತ್ತು ಮುಳುಗುವ ಸಮಯ. ಗುಡ್ಡದಕೊಳ್ಳ ಹಂಪಿಯಿಂದ ನಾಲ್ಕಾರು ಮೈಲು ದೂರ. ಅಷ್ಟರಲ್ಲಿ ಇಬ್ಬರು ಹುಂಬರು ಒಬ್ಬ ಹೆಂಗುಸನ್ನೋಡಿಸಿಕೊಂಡು ಬಂದು ಗುಡಿಯನ್ನು ಹೊಕ್ಕರು. ಕೇಳುವುದೇನು? ನಮ್ಮ ಮಾಸ್ತರರಿಗೆ ಒಂದು ತಿಳಿಯೆಂದರೆ ನೂರು ತಿಳಿಯಹತ್ತಿತು. ಬಂದ ದಾರೀ ಹಿಡಿದರು. ಆದರೆ ಆ ಟೊಣಪರಿಬ್ಬರೂ ಬೆನ್ನು ಹತ್ತಿದರು. ಇವರು ಮುಂದೆ ಅವರು ಹಿಂದೆ. ಓಡು ನಡೆಯಿತು. ಮಾಸ್ತರರ ಜೀವವು ಮಾಸ್ತರವಲ್ಲದಂತಾಗುವ ಹೊತ್ತು ಬಂತು. ಅವರು ತೀರಾ ಬೆನ್ನಮೇಲೆಯೇ ಬಂದರು. ಮಾಸ್ತರರ ಬಾಯಿಯ ಎಸರು ಅಟ್ಟಿಸಿತು. ಸಾಯುವುದು ನಿಶ್ಚಯವೆಂದು ಗೊತ್ತಾಯಿತು. ಅಷ್ಟೊತ್ತಿಗೆ ಒಂದು ಅಡ್ಡದಾರಿ ಬಂತು ಆ ಹಾದೀ ಹಿಡಿದು ನಾಲ್ಕು ಜನ ಕೂಲಿಕಾರರು ಹೊರಟಿದ್ದರು. ಅವರನ್ನು ನೋಡಿದ ಕೂಡಲೇ ಕೊಲೆಗಡಕರು ಹಿಂದೆಗೆದರು. ದೇವಾನುಗ್ರಹದಿಂದ ಮಾಸ್ತರರು ಬದುಕಿಕೊಂಡು ಅಂದಿನ ಇರುಳನ್ನು ಆ ಕೂಲಿಕಾರರ ಹಳ್ಳಿಯಲ್ಲಿ ಕಳೆದು ಮರುದಿನ ತಮ್ಮ ನಾಡಿಗೆ ತಾವು ಹೊರಟರು.

ಇದಿರಲಿ. ಇವರು ಚಿಕ್ಕಂದಿನಲ್ಲಿ ಅನೇಕ ದೈವೀಲೀಲೆಗಳನ್ನು ಕಂಡಿದ್ದಾರೆ. ಅಯ್ದನೇ ತರಗತಿಯಲ್ಲಿದ್ದಾಗ ಒಮ್ಮೆ ಕನಸು ಬಿತ್ತು. ಕನಸಿನಲ್ಲಿ ಪರಮೇಶ್ವರನು ಬಂದು-'ನೀನು ಬೇಡಿದ್ದನ್ನು ಕೊಡುತ್ತೇನೆ. ಏನುಬೇಕು?'

ಎಂದು ಕೇಳಿದ್ದಕ್ಕೆ ಇವರು ಸುಮ್ಮನೆ ಕುಳಿತರು. ಕನಸೆಂದರೆ ಅವರು ಹೇಳಿದರೇ ಗೊತ್ತಾಗುವಂಥದಲ್ಲವೇ? ಅದು ಸುಳ್ಳು–ಪಳ್ಳು ಅನ್ನಬೇಕಾದರೆ ಅವರು ಹೇಳಿದ್ದೇ ಸುಳ್ಳು ಅನ್ನಬೇಕಾಗುತ್ತದೆ. ಇಂಥವರು ಸುಳ್ಳು ಹೇಳಿ ಅನ್ಯರಿಗೆ ಮೋಸಮಾಡುವ ಡಂಭಕರೇ? ಅಲ್ಲ.

ಚಿಕ್ಕಂದಿನಲ್ಲಿ ದೇವೀಪಾರಾಯಣ ಮಾಡುತ್ತಿದ್ದರೆಂಬ ಸಂಗತಿಯು ಗೊತ್ತಿದೆಯಷ್ಟೇ? ಆ ಸಂಧಾನದಲ್ಲಿ ಒಂದು ರಾತ್ರಿ ದೇವಿಯು ಸಾದಾ ಸ್ತ್ರೀ ವೇಷದಲ್ಲಿ, ಮೊಲೆ ಕುಡಿಸುತ್ತ ಇವರ ತಲೆಯ ಹತ್ತರ ಕುಳಿತಿದ್ದಾಳೆ. ಎದ್ದು ಕಾಲು ಬೀಳುವುದರೊಳಗೆ ಮಾಯವಾಗಿ ಹೋದಳಂತೆ. ಹಾಗೆ ಹೋದುದನ್ನು ನೆನೆನೆನೆದು ಹಳಹಳಿಸುತ್ತಿದ್ದರು. ಶ್ರೀ ವಿವೇಕಾನಂದ ಸ್ವಾಮಿಗಳು ವಿದ್ಯಾರ್ಥಿಗಳಿದ್ದಾಗ ನಡುರಾತ್ರಿಯಲ್ಲೊಮ್ಮೆ ಬಾಗಿಲು ಹಾಕಿ ಧ್ಯಾನಿಸುತ್ತ ಕುಳಿತಿದ್ದರು. ಧ್ಯಾನವು ಮುಗಿದ ಮೇಲೆ ಗೋಡೆಯೊಡೆದು ಒಂದು ಬೆಳಕಿನ ಮೂರ್ತಿಯು ಹೊರಗೆ ಬಂತು. ಮಹಾಶಾಂತ ಸನ್ಯಾಸಿಯ ಮೂರ್ತಿ, ಬೋಳಿಸಿದ ತಲೆ, ಕೈಯಲ್ಲಿ ದಂಡಕಮಂಡಲು! ಅವರನ್ನು ಕಣ್ಣುಬಡಿಯದೇ ನೋಡುತ್ತಿತ್ತು. ಅವರೂ ಬೆರಗಾಗಿ ಆ ಕಡೆಗೆ ನೋಡುತ್ತಿದ್ದರು. ಏನೋ ದಿಗಿಲುಬಿದ್ದು, ಬಾಗಿಲು ತೆಗೆದು ಹೊರಗೆ ಹೋದರಂತೆ! ಮೂರ್ತಿಯು ಅದೃಶ್ಯವಾಯಿತಂತೆ! ಅವರೇ ತಮ್ಮ ಅಂತರಂಗಿಕ ಶಿಷ್ಯರಿಗೆ ಹೀಗೆ ಹೇಳಿದ ಸಂಗತಿಯಿದು.

ಒಮ್ಮೆ ಆರು ತಿಂಗಳ ರಜೆ ತೆಗೆದುಕೊಂಡು ಕೋಣೆ ಹಿಡಿದು ಸಾಧನೆ ಮಾಡುತ್ತಿದ್ದ ಕಾಲದಲ್ಲಿ ತಗಣಿಗಳು ಬಹಳ ತೊಂದರೆ ಕೊಡಹತ್ತಿದವು. ಮೂರು ನಾಲ್ಕು ತಿಂಗಳುಗಳ ವರೆಗೆ ಹಾಗೆಯೇ ತಾಳಿಕೊಂಡರು. ಕೊನೆಗೊಂದು ದಿವಸ ದೇವರಿಗೆ ಮೊರೆಯಿಟ್ಟು ಅತ್ತು ವಿಭೂತಿಯಿಂದ ಪ್ರಣಾಮವನ್ನು ಬರೆದರು. ಅಂದಿನಿಂದ ತಗಣಿಯ ಕಾಟವು ಇಲ್ಲದಂತಾಯಿತು. ಮತ್ತೊಮ್ಮೆ ಲಿಂಗಪೂಜೆಗೆ ಕುಳಿತಾಗಲೇ ಒಂದಿಲಿಯು ಬಂದು ತೊಡೆಯ ಮೇಲೆ ಕುಳಿತು ಪೂಜೆಯಾದ ಬಳಿಕ ಹೋಗಿಬಿಟ್ಟಿತಂತೆ! ಶ್ರೀ ದ್ವಿಜೇಂದ್ರನಾಥ ಟಾಗೋರರು 'ಶಾಂತಿನಿಕೇತನ'ದಲ್ಲಿ ಧ್ಯಾನಸ್ಥರಾಗಿ ಕುಳಿತಾಗ ಇಣಚಿಗಳು ಹಣ್ಣುಗಳನ್ನು ಎತ್ತಿಕೊಂಡು ತಂದು ತೊಡೆಯ ಮೇಲೆ ಕುಳಿತು ತಿಂದು ಹೋಗುತ್ತಿದ್ದವೆಂದು ಈಟ್ಸನೆಂಬ ಪಾಶ್ಚಾತ್ಯ ಪ್ರಖ್ಯಾತ ಕವಿಯು ಕಣ್ಣಾರೆ ಕಂಡು ಬಣ್ಣಿಸಿರುವನು. ನಮಗೆ ಪ್ರಾಣಿಗಳಲ್ಲೆಲ್ಲ ಸಹೃದಯತೆಯುಂಟಾದರೆ ಇಂಥ ಅನುಭವಗಳು ಉಂಟಾಗುವದಕ್ಕೆ ಅಡ್ಡಯೇನು?

---

# ೬. ಸುಧಾರಣೆಗಳು

**ಇಂದ್ರಿಯಂಗಳನೆಲ್ಲವನು ಮುದ | ದಿಂದ ನಿಯಮಿಸಿ ಸಕಲ ಭೂತದೊ-**
**ಳೊಂದು ಬುದ್ಧಿಯನುಳ್ಳವರು ಸಚರಾಚರಂಗಳಲಿ ||**
**ಕುಂದದೆಂದುಂ ಹಿತವನೇನಲ | ವಿಂದಲಾಚರಿಸುವರು ತಾವಾ**
**ನಂದ ರೂಪಿನಲೆನ್ನನೈದುವನೆಂದನಸುರಾರಿ ||** —ನಾಗರಸ ಕನ್ನಡಗೀತೆ.

ಸುಧಾರಣೆಯೆಂದ ಕೂಡಲೇ ಇದೇತಕ್ಕೆ ಬೇಕಪ್ಪಾ, ಅನಾದಿಕಾಲ ದಿಂಲೂ ನಮ್ಮ ದೇಶದ ಸಮಾಜ ರಚನೆಯು ಎಲ್ಲರಿಗೂ ಮೇಲ್ತರದ್ದಾಗಿರಲು ಇನ್ನು ಹೊಸತಾಗಿ ಸುಧಾರಣೆ ಮಾಡುವುದೇನು?—ಎಂದು ಶಂಕಿಸುವ್ರು ದುಂಟು. ಆದರೆ ನಮ್ಮ ಹಿರಿಯರು ಒಳ್ಳೆಯ ನಡಾವಳಿಗಳು ಸರಿಯಾಗಿ ನಡೆಯಲೆಂದೇ ಸಮಾಜದ ಅಧಿಕಾರಿಗಳನ್ನು ಮಾಡಿದ್ದಾರಲ್ಲವೇ? ಮುಂಜಾ ವಿನ ರೀತಿಯನ್ನು ಮಧ್ಯಾಹ್ನಕ್ಕೆ ಬದಲು ಮಾಡಬೇಕಾಗುವ ಹೊತ್ತು ಇದೀಗ ಬಂದಿದೆ. ಕ್ಷಣಕ್ಷಣಕ್ಕೂ ಹೊತ್ತು ಬದಲಾಗಹತ್ತಿರುವಾಗ ಕೊಡೆಯನ್ನು ಹೊರಳಿಸಿ ಹಿಡಿಯದಿದ್ದರೆ ಆಗುವದೇ? ಸಾಮಾನ್ಯ ಜನರು ಮುಸ್ಸಂದು ಹಾಗೇ ಕುಳಿತು ಬಿಡುವವರು ಹೊತ್ತು ಬದಲಾದಾಗ ಬಿಸಿಮುಟ್ಟಿದ ಕೆಲವು ಹಿರಿಯರು ಎಚ್ಚತ್ತು ಸಾಮಾನ್ಯರನ್ನೂ ಎಚ್ಚರಿಸಬೇಕಾಗುವದು. ಹಿಂದಕಿ ನವರು ಮಾಡಿದ ಅಧಿಕಾರಿಗಳು ಈಗ ಬರಿಯ ಅಧಿಕಾರಿಗಳೇ ಆಗಿ ಅಧಿಕಾರ ನಡೆಸುವವರು ಮಾತ್ರ ಆಗಿದ್ದಾರೆ. ಅಲ್ಲದೆ ಕರ್ತವ್ಯವನ್ನು ಕೇಳಬಾರದು. "ಭತ್ತವಿದ್ದೂ ಬಡತನ, ಗಂಡನಿದ್ದೂ ರಂಡೆತನ" ಎನ್ನುವಂತೆ ನಮ್ಮ ಸ್ಥಿತಿ ಆಗಿದೆ. "ಊರ ತುಂಬ ಗಂಡರಿದ್ದರೂ ಉಡಲಿಕ್ಕೆ ಸೀರೆಯಿಲ್ಲ" ಯೆಂದಂ ತಾಗಿದೆ. ಸಮಾಜದ ಭದ್ರತೆಗೂ ಏರಿಳಿವುಗಳಿಗೂ ಹೊಣೆಗಾರರೆನಿಸಿದವರು ಬೇಕಾದಷ್ಟು ಜನರುಂಟು. ಆದರೆ ಹಾದಿ ತೋರಿಸಿಕೊಡಬಲ್ಲವರು ಯಾರೂ ಇಲ್ಲೆಂದರೂ ಸರಿ. ತಮಗೇ ಗೊತ್ತಿರದ ಹಾದಿಯನ್ನೇನು ತೋರಿಸುತ್ತಾರೆ ಮುಂದಿಗೆ? ಹೊಣೆಗಾರರಿಂದ ಆಗಬೇಕಾದ ಕಲ್ಯಾಣವಂತೂ ಇರಲಿ. ತಿರುಗಿ ಗೂಳಿಬಿದ್ದಾಗ ಆಳಿಗೊಂದು ಕಲ್ಲು ಒಗೆಯಲಿಕ್ಕೆ ಬಂದರೆ ಜನತೆಯು ದಿಕ್ಕು ತಪ್ಪಿ ಹೋಗುವುದರಲ್ಲಿ ಸಂಶಯವೇ ಇಲ್ಲ. ನಮ್ಮ ಸಮಾಜದ ಪ್ರತಿಯೊಂದು ಸೂತ್ರವು ಧರ್ಮದ್ದಾಗಿ ಗುರುವರ್ಗದವರ ಕಡೆಗೂ ದೈವದವರ ಕಡೆಗೂ

ಉಳಿದಿವೆ. ಮೊದಲಿನ ಕಾಲಕ್ಕದು ಯೋಗ್ಯವಾಗಿಯೇ ಇತ್ತು. ಈಗ ನಮ್ಮ ಪಾರಮಾರ್ಥಿಕ ಧರ್ಮದಲ್ಲಿ ರಾಷ್ಟ್ರೀಯ ಧರ್ಮವೊಂದು ಸಮಾವೇಶವಾಗ ತೊಡಗಿದೆ. " ಸಮಾಜದ ಕೈಯಲ್ಲಿಯೂ ಪರಿಷತ್ತುಗಳ ಕೈಯಲ್ಲಿಯೂ ಇದ್ದ ಧರ್ಮಶಾಸ್ತ್ರದ ಮತ್ತು ಧರ್ಮಶಾಸನದ ಸೂತ್ರಗಳು ಏಕತಂತ್ರೀ ಮಠಾಧಿಕಾರಿಗಳ ಮತ್ತು ರಾಷ್ಟ್ರಸ್ಥಿತಿಯನ್ನರಿಯದ–ಲೋಕಸಂಗ್ರಹವನ್ನರಿಯದ ಸಾಧುಸ್ವಾಮಿಗಳ ಕೈಸೇರಿವೆ." ಆದ್ದರಿಂದ ಆ ಸೂತ್ರ–ಧಾರಿಗಳ ದಾರಿಯನ್ನೇ ನೋಡುತ್ತ ಕುಳ್ಳಿರದೆ ಬಲ್ಲಿದವರಾದವರು ಮುಂದಾಗಿ ಲೋಕಪುರುಷನ ಕಾಯಿಲೆಗೆ ತಕ್ಕ ಆರೈಕೆ ಮಾಡುವರು. ಲೋಕ ಸುಧಾರಣೆ ಮಾಡಲಿಕ್ಕೆ ನಮಗಾವ ಅಧಿಕಾರವಿದೆ? ನಾವು ಯಾವ ಗಿಡದ ತೊಪ್ಪಲು? ಆ ಅನಂತನ ಇಚ್ಛೆಯಾದರೋ ಏನಿದೆಯೋ ಯಾರು ಬಲ್ಲರು? " ಜನರಿಗೆ ಉಪದೇಶ ಮಾಡುವುದು ಕಷ್ಟ. ಭಗವದ್ದರ್ಶನ ಮಾಡಿ ಅವನ ಅಪ್ಪಣೆಯನ್ನು ಪಡೆದರೆ ಲೋಕಶಿಕ್ಷಣವನ್ನು ಮಾಡುವುದಕ್ಕಾಗುತ್ತದೆ....ಭಗವಂತನನ್ನು ಮೊದಲು ಹೃದಯ ಮಂದಿರದಲ್ಲಿ ಪ್ರತಿಷ್ಠಿಸು. ಆ ಮೇಲೆ ಪ್ರಸಂಗ ಮಾಡುವುದೂ ವ್ಯಾಖ್ಯಾನ ಕೊಡುವುದೂ ಇಷ್ಟವಾದರೆ ಮಾಡು." ಎಂದು ಬೋಧಿಸುವ ರಾಮಕೃಷ್ಣ ಪರಮಹಂಸರ ಮೊದಲಿನ ವಾಕ್ಯವನ್ನು ಕೇಳಿ ಕೈಕಾಲು ಕಳಕೊಳ್ಳಬಹುದು. ಆದರೆ ಹಿಂದುಗಡೆಯ ಮಾತನ್ನು ಕೇಳಿದರೆ ಜೀವ ತಿರುಗುತ್ತದೆ. ಅವರ ಅಭಿಪ್ರಾಯದಂತೆ ಪರಮಾತ್ಮಪ್ರಾಪ್ತಿಯು ಹೆಚ್ಚಿನದು. ಅದನ್ನು ಮೊದಲು ಸಾಧಿಸುವುದು ಒಳ್ಳೆಯದು. ಸಂತೆಗೆ ಹೋಗಿ, ನಮಗೆ ಬೇಕಾದ ಸಾಮಾನು ಮೊದಲು ಕೊಂಡುಕೊಂಡು ಆ ಮೇಲೆ ಮುಂದಿಯ ಕೆಲಸಗಳಿಗೆ ನೆರವಾಗಬಹುದು. ನಿಜ. ಶ್ರೀ ವಿದ್ಯಾರಣ್ಯ ಮುನಿಗಳು ವಿಜಯನಗರದ ರಾಜ್ಯಸ್ಥಾಪನೆ ಮಾಡುವ ಮೊದಲು ತಪಶ್ಚರ್ಯವನ್ನು ಮಾಡಿ ಭುವನೇಶ್ವರಿ ಮಾತೆಯನ್ನು ಪ್ರತ್ಯಕ್ಷ ಮಾಡಿಕೊಂಡರು. ಆ ಮೇಲೆ ಮುಂದಿನ ಕಾರ್ಯಗಳಿಗೆ ಯಾವ ತಡೆಯೂ ಉಂಟಾಗಲಿಲ್ಲ. ಆದರೆ " ದೇಶಸೇವೆಯೇ ದೇವಸೇವೆ* ಯೆಂದು ಕಂಕಣ ಕಟ್ಟಿದವರಿಗೆ ಅದ ಆಜ್ಞೆಯೇ ಈಶ್ವರಾಜ್ಞೆಯೆನ್ನಬೇಕು; ಅದೇ ಆತನ ಅನುಗ್ರಹವೆನ್ನಬೇಕು.

---

* ಕಲಿಯು ಕೈಯ ಕೈದುವಿನಂತಿರಬೇಕಯ್ಯ. ಎಲಾದೋರಿ ಸಾಸವಾಡಿದರೆ ಸೈರಿಸಬೇಕಯ್ಯ. ರಣದಲ್ಲಿ ತಲೆ ಹರಿದು ನೆಲಕ್ಕೆ ಬಿದ್ದು ಬೊಬ್ಬಿಡಲದಕೊಲಿವ ಕೂಡಲಸಂಗಮದೇವ.— ಶ್ರೀ ಬಸವಣ್ಣನವರು.

ಶ್ರೀರಾಮತೀರ್ಥರು ಅನ್ನುವಂತೆ—“ಜನಗಳಲ್ಲುಂಟಾದ ವಿಚಾರವೇ ಏಕೀಭವಿಸಿ ಒಬ್ಬನಲ್ಲಿ ಪ್ರಕಟವಾಗುತ್ತದೆ.” ಧರ್ಮಗ್ಲಾನಿಯಾದಾಗ ಭಗವಂತನು ಇಳಿದು ಬರುವನಂತೆ. ಸಣ್ಣ ಪುಟ್ಟ ಕೆಲಸಗಳಿಗಾಗಿ ಒಬ್ಬ ದೂತನನ್ನು ಪ್ರೇರಿಸಿದ್ದಾನೆನ್ನಬೇಕು. ಶ್ರೀ ಮಹರ್ಷಿ ಅರವಿಂದ ಘೋಷರು ದೇಶಸೇವೆಯನ್ನು ಮಾಡಿದ್ದಕ್ಕೆ—“ವಾಸುದೇವನ ದರ್ಶನವನ್ನು ಸೆರೆಮನೆಯಲ್ಲಿ ಹೊಂದಿದರು. ಅವರು ದೇಶವನ್ನು ದೇವರೆಂಬ ಭಾವನೆಯಿಂದ ಕಂಡು ಕೆಲಸ ಮಾಡಿದ್ದರಿಂದಲೇ ತಕ್ಕ ಪ್ರತಿಫಲವು ಸಿಕ್ಕಿತು.

. ಶ್ರೀ ವಿವೇಕಾನಂದ ಸ್ವಾಮಿಗಳು ಕಾಶ್ಮೀರದಲ್ಲಿದ್ದಾಗ ಅಮರನಾಥದ ಒಂದು ದೇವಿಯ ಗುಡಿಯು ಹಾಳಾದದ್ದನ್ನು ಕ ಡು, ಇದನ್ನು ಮಹಮ್ಮದಿಯರು ಹಾಳುಮಾಡಿದರೆಂದೂ ಆ ಕಾಲಕ್ಕೆ ತಾವಿದ್ದಿದ್ದರೆ ತಲೆಗೆ ತಲೆ ಕೊಡುತ್ತಿದ್ದೆನೆಂದೂ ವಿಚಾರಿಸಿದರು. ಅಷ್ಟರಲ್ಲಿ ಒಂದು ಅಶರೀರವಾಣಿಯು ಕೇಳಿಸಿತಂತೆ. “ಗುಡಿಯು ಹಾಳಾಗುವುದೇ ನನ್ನ ಇಷ್ಟ. ನನಗೆ ವೈಭವ ಬೇಕಾದರೆ ಬಂಗಾರದ ಗುಡಿಯನ್ನು ಕಟ್ಟಿಸಿಕೊಳ್ಳಲಿಕ್ಕೆ ಆಗದೇ? ನೀನೇನು ಮಾಡಬಲ್ಲೆ?” ಇಂಥ ಅಶರೀರ ವಾಣಿಯನ್ನು ಕೇಳಿದವರಾದರೂ ಅವರು, ನಮ್ಮ ದೇಶವೂ ಜನರೂ ಅಧೋಗತಿಗಿಳಿಯುತ್ತಿರುವುದು ಆ ಪರಮಾತ್ಮನ ಇಚ್ಛೆಯೆನ್ನಲಿಲ್ಲ. ಅವನು ಇಷ್ಟವಾದರೆ ದೇಶವನ್ನೆಲ್ಲ ಉದ್ಧರಿಸಿಕೊಂಡಾನೆನ್ನಲಿಲ್ಲ. ಅಂಥ ವಿಚಾರವನ್ನು ಹತ್ತಿರಕ್ಕೂ ಸುಳಿಯಗೊಡದೆ—“ಈ ಜಗತ್ತಿನ ದುಃಖವನ್ನು ಹೋಗಲಾಡಿಸುವುದಕ್ಕೆ ನಾನು ಸಹಸ್ರ ಜನ್ಮವೆತ್ತ ಬೇಕಾದರೂ ಎತ್ತಿಬರುವೆನು. ಅದರಿಂದ ಯಾರಿಗಾದರೂ ಒಂದಿಷ್ಟು ದುಃಖವು ಹಿಂಗುವುದಾದರೂ ಹಾಗೆ ಮಾಡುವೆನು. ಬರೀ ಒಬ್ಬನ ಮುಕ್ತಿಯನ್ನು ಕಟ್ಟಿಕೊಂಡು ಆಗುವದೇನು?” ಎಂದು ಸಿಂಹಗರ್ಜನೆ ಮಾಡಿ ಲೋಕಸೇವಾಸಕ್ತರಾಗಿ ಕಂಕಣಕಟ್ಟಿ ನಿಲ್ಲಲಿಲ್ಲವೇ? ಎಲ್ಲವೂ ಆತನ ಇಷ್ಟದಂತೆ ಸಾಗುತ್ತಿರಲು ಜನಸೇವೆ ಮಾಡುವುದೇ ಆತನಿಗೆ ಅನಿಷ್ಟವೇನು? ಯಾವ ಧರ್ಮವಾದರೂ ಪರೋಪಕಾರಕ್ಕೆ ಸ್ಥಳವನ್ನು ಕೊಟ್ಟೇ ಇದೆ.

ಕಾರ್ಯಭಾಗಕ್ಕೆ ತಕ್ಕಂತೆ ದೇಶಸೇವೆಯೂ ಹಿರಿಕಿರಿಯದಾಗುತ್ತದೆ. ಇಡಿಯ ದೇಶಕ್ಕೆ ಮುಂದಾಳುವಾಗಿ ಬಂದಂಥ ಸಿಹಿ-ಕಹಿ ತುತ್ತುಗಳನ್ನೆಲ್ಲ ಸಿಹಿಯೆಂದೇ ನುಂಗುತ್ತ ದೇಶಭಕ್ತ—ಲಾಲಾಜಿಯವರಂತೆ ರಣದಲ್ಲೇ ಮರಣ ಹೊಂದುವ ದೇಶಸೇವೆಯು ಹೆಚ್ಚಿನದು. ತಮ್ಮಿಂದಾದಷ್ಟು ಪರೋಪಕಾರಾದಿ

ಸತ್ಕೃತ್ಯಗಳನ್ನು ಮಾಡುವುದೂ ದೇಶಸೇವೆ. 'ಹಿಡಿದ ಕೆಲಸವನ್ನು ನ್ಯಾಯ ವಾದ ರೀತಿಯಲ್ಲಿ ಸಾಗಿಸುವುದೂ ದೇಶಸೇವೆ.' ಕಡೆಗೆ 'ದಿನಾಲು ವ್ಯಾಯಾಮ ಮಾಡಿದರೂ ದೇಶಸೇವೆಯಾಗುತ್ತದೆ.' (ಮ. ಗಾಂಧಿ) ರಾಷ್ಟ್ರೀಯ ಸಭೆಗೆ ಅಧ್ಯಕ್ಷರಾದವರೇ ದೇಶಸೇವಕರೆಂದೂ ಅವರ ಕಾರ್ಯವೇ ದೇಶಸೇವೆಯೆಂದೂ ಅವರೇ ಮುಂದಾಳುಗಳೆಂದೂ ಅನ್ನುವುದು ತೀರ ತಪ್ಪು. 'ಸುದಾಮನ ಅವಲಕ್ಕಿ' ಯೆಂದು ಕೃಷ್ಣನು ಮೋರೆ ತಿರುವಿದನೇ? ವಿದುರನ ಕೊಳಕು ಬಾಳೆಹಣ್ಣಿನ ತೊಗಟೆಯೆಂದು ಅವನು ಬಾಯಿತೆರೆಯದೆ ಇದ್ದನೇ? ದೇಶವು ಎಷ್ಟು ವೈಯಿಂದ ಮೇಲಕ್ಕೇರಬೇಕಾಗುತ್ತದೆಂಬುದು ಅಲ್ಲಿಯ ನಾನಾತರದ ಚಳುವಳಿಗಳಿಂದ ಕಂಡುಬರುತ್ತದೆ. ಅಷ್ಟು ಕಾರ್ಯಭಾಗ ಗಳಲ್ಲಿ ಒಂದರಲ್ಲಾದರೂ ಭಾಗ ತೆಗೆದುಕೊಳ್ಳುವದಾಗದೇ? ದೇಶಸೇವಕ ನೆಂದು ಬಿರುದು ಪಡೆಯಲಿಕ್ಕೆ ಯತ್ನಿಸುವುದು ದಡ್ಡತನ. ದೇಶಹಿತದ ಕುದಿಯು ಇದ್ದರೆ ದೇಶದ ಕೀಳ್ದೆಸೆಯನ್ನು ಕಂಡು ಕರುಳು ಕರುಗುತ್ತಿದ್ದರೆ ಬಿರುದು ಮೊದಲಾದ ಪದವಿಗಳಿಗೂ ಹೆಸರಾಗಬೇಕೆಂಬ ಲವಲವಿಕೆಗೂ ಬಲೆ ಬೀಳುವದಿಲ್ಲ. ಇಂಥವರೇ ನಿಜವಾದ ದೇಶಸೇವಕರು. ಇಲ್ಲದ ಸೋಗು ಹಾಕಿಕೊಂಡು ಜನರನ್ನೆಲ್ಲ ಎಳಕೊಂಡು ಅವರೊಡನೆ ಕುಣಿಯುವ ಮುಂದಾಳುಗಳಿಂದ ನಮಗೆ ಕಲ್ಯಾಣವಿಲ್ಲ. ಹಳ್ಳಿಯಲ್ಲಿಯೇ ಹುಟ್ಟಿ ಅಷ್ಟ ರಲ್ಲಿಯೇ ಯುಕ್ತವಾದ ಕಾರ್ಯ ಮಾಡಿದ ಹಳ್ಳಿಯ ಮುಂದಾಳುಗಳೂ ಮಾನ್ಯರೇ.

ರೇವಣಸಿದ್ದಪ್ಪನವರು ಊರೂರು ತಿರುಗಿ ವ್ಯಾಖ್ಯಾನ ಹೇಳುವರಲ್ಲ. ಅವರು ಇದ್ದೂರಲ್ಲೇ ಇದ್ದು ಮೂಕಾಟಲೆ ಕಾರ್ಯಮಾಡುವವರು? ಗುಡ್ಡ ದಂಥ ರಾಗಮಾಡಿ ಗೊಡ್ಡು ಹಾಡಿದಂತೆ ಅಲ್ಲ. ಭೀಷ್ಮಪ್ರತಿಜ್ಞೆ ಮಾಡಿ ಹಾದರಗಿತ್ತಿಯು ಬಾಯಿಮಾಡಿದಂತೆ ನಾಡೆಲ್ಲ ಸುದ್ದಿ ಬೀರಿದರೆ ಆಗಲಿಲ್ಲ-ಹೋಗಲಿಲ್ಲ! ಇಂಥ ಸಾವಿರಾರು ಸಭೆಗಳಾಗಿ ಉಪಯೋಗವೇನು? ಇಂಥ ಲ್ಲಾದ ವ್ಯಾಖ್ಯಾನಗಳೆಂದರೆ ಮಾತಾಡಲಿಕ್ಕೆ ಕಲಿಯುವ ಬಣಗು ನುಡಿಗಳೇ. ಸಭೆಗಳೂ ವ್ಯಾಖ್ಯಾನಗಳೂ ಬೇಡವೆಂತಲ್ಲ. ಆಡಿದಂತೆ ಮಾಡಿದರೆ ಚಿಂತೆ ಯಿಲ್ಲ. ಮಾತು ಮನಾರ ಕೈ ಸುಮಾರ. ಶ್ರೀ ವಿವೇಕಾನಂದರು ಹೇಳಿ ಲ್ಲವೇ?—"ಒಬ್ಬ ಮನುಷ್ಯನು ತಯಾರಾದರೆ ಲಕ್ಷ ಉಪನ್ಯಾಸಗಳ ಫಲ ವಾಗುವದು" ಎಂದು. ರೇವಣಸಿದ್ದಪ್ಪನವರು ವ್ಯಾಖ್ಯಾನ ಹೇಳಿದ್ದೂ

ಓದಿದ್ದೂ ಕೂಡಿ ಎರಡು ಸಲವೋ ಮೂರು ಸಲವೋ. ಕಾಲೇಜಿನಲ್ಲಿ ಶಿಕ್ಷಣದ ವಿಷಯವಾಗಿ ಹೇಳಿದ್ದು ಒಮ್ಮೆ. ಬಸವಜಯಂತಿಯಲ್ಲೋ ಏನೋ ಮತ್ತೊಮ್ಮೆ. ಅಥಣಿಗೆ ಮಹಾಸ್ವಾಮಿಗಳ ದರ್ಶನಕ್ಕೆ ಹೋದಾಗ ಬಹಳ ಆಗ್ರಹಮಾಡಿದಾಗ ಮಗುದೊಮ್ಮೆ. ಹೀಗೆ ಮೂರು ಸಾರೆ ಇರ ಬೇಕು. ಮೊದಲಿನವೆರಡು ಓದಿದ ಉಪನ್ಯಾಸಗಳು. ಕೊನೆಯದು ಹೇಳಿದ ವ್ಯಾಖ್ಯಾನ. ಅದು ಶ್ರೀಗಳವರ ಆಶೀರ್ವಾದದಿಂದ ಉತ್ತಮೋತ್ತಮವಾಯಿ ತಂತೆ. ಮೊದಲನೆಯದಾದರೂ ಉತ್ತಮವಾಯಿತೆಂದ ಮೇಲೆ ವ್ಯಾಖ್ಯಾನ ಹೇಳಲಿಕ್ಕೆ ಬಾರದೆಂದು ಅದನ್ನು ಬಿಟ್ಟರಲಿಲ್ಲ

ಮಾಸ್ತರರು ಹಳ್ಳಿಗರಿಗೆ ಹೇಗೆ ಬೇಕೋ ಹಾಗೆ ಇದ್ದರು. ಅಂದರೆ ಬೇರೆ ತಿಳಕೊಳ್ಳಬೇಡಿರಿ. ಹಳ್ಳಿಗರನ್ನು ಹೇಗೆ ಹಾದಿಗೆ ತರಬೇಕೆಂಬುದನ್ನು ಬಲ್ಲವರೂ ಅದರಂತೆ ನಡೆಯುವವರೂ ಕಳಕಳಿಯುಳ್ಳವರೂ ಆಗಿದ್ದರು. ಸಂಸ್ಕಾರದರಿಯದ ಗುದ್ದಲಿಯವರನ್ನು ಹಾದಿಗೆ ತರುವುದೂ ಸರಳವಾದ ಕೆಲಸವಲ್ಲ. ಸುಶಿಕ್ಷಿತರಾಗದವರಿಗೆ ಹೇಳಿದರೆ ಕೇಳದೆ ಬಿಡುವರು ಅಷ್ಟೇ! ಆದರೆ ಹಳ್ಳಿಗರು ಕೇಳದಿರುವುದು ಅಷ್ಟೇ ಅಲ್ಲ 'ನಾ ವೀರ ನಾ ಪೀರ' ಎಂದು ಕಾದಾಡಲಿಕ್ಕೆ ನಿಲ್ಲುವರು. ಅಂಥ ಕೋಣಗಳನ್ನು ಮೂಗದಾಣಿ ಪವಣಿಸಿ ಈಲು ಮಾಡಿಕೊಳ್ಳಬೇಕಾದರೆ ಸಹನಶಕ್ತಿಯೆಷ್ಟು ಬೇಕು. ಅದು ಹೇಡಿತನವಲ್ಲ. ಎದುರಾಳಿಯನ್ನು ಸದೆಬಡೆಯುವ ಶಕ್ತಿಯಿದ್ದರೂ 'ನೀತಿಯ ನಿಮಿತ್ತವಾಗಿ ತಾಳಿಕೊಳ್ಳುವುದೇ ಸಹನಶೀಲತೆಯು. ಸಹನಶೀಲತೆಯ ಜೊತೆಗೆ ಸತ್ಯವೂ ಬೇಕು. ಸತ್ಯವು ನಿರ್ಭಯದೊಡನೆ ಕೂಡಿದ್ದಿರಬೇಕು. ಅಂತು, ನನ್ನ ಗೆಳೆಯರೊಬ್ಬರು ಅನುಭವದಿಂದ ಕಂಡುಹಿಡಿದಂತೆ "ಮ. ಗಾಂಧಿಯವರ ಒಂಬತ್ತು ತತ್ವಗಳು ಜೀವನಕ್ಕೆ ಒಳ್ಳೆಯ ಉಪಕಾರಿಗಳಾಗಿವೆ." ಅವರ ಸ್ವದೇಶೀ ತತ್ವವಂತೂ ಹೊತ್ತುಹೊರಟರೆ ಹೊಟ್ಟೆಯ ಹಿಟ್ಟಿಗೆ ಮೂಲಾಧಾರವು. ಅವರ ರಾಟಿಯಂತೂ ಶ್ರೀಕೃಷ್ಣನ ಕೈಚಕ್ರದಂತೆ ದಾರಿದ್ರ್ಯ ಮೊದಲಾದ ಕಗ್ಗತ್ತಲೆಯನ್ನು ಚದರಿಸುವದು. ಅಹಿಂಸೆಯು ಸುಲಭವಲ್ಲದಿದ್ದರೂ ಅದು ನೀತಿಯ ರಹಸ್ಯವೆನ್ನಬಹುದು. ಇರಲಿ. ಈ ತತ್ವಗಳಿಂದ ಯಾರ ಮೈ ಉಂಡಿರುವದೋ ಅವರು ಜೀವನವನ್ನು ಸುಲಭ ವಾಗಿ ಸಾಗಿಸಬಲ್ಲರೆಂದು ಯಾರಿಗಾದರೂ ಹೊಳೆಯುವದು. ಈ ಗುಣಗಳ ತೇಜಸ್ಸಿದ್ದರೆ ಯಾವ ಕಾರ್ಯದಲ್ಲಾದರೂ ಕೈಹಾಕಬಹುದು. ಶ್ರೀಅರವಿಂದ

ಘೋಷಪು ಹೇಳಿದ್ದನ್ನು ಕೇಳಿರಿ—" ಪತಿತರನ್ನು ಉದ್ಧರಿಸುವುದಕ್ಕೆ ನಮಗೆ ಶಕ್ತಿಬೇಕು. ಶರೀರ ಒಲ್ಲವಲ್ಲ, ಕತ್ತಿ ತುಬಾಕಿಗಳಿಂದ ಕಾಳಗ ಮಾಡ ಹೋಗುವದಲ್ಲ, ಜ್ಞಾನದಿಂದಲೇ. ಕ್ಷಾತ್ರತೇಜವೊಂದೇ ಅಲ್ಲ ಬ್ರಹ್ಮತೇಜ ವೊಂದಿದೆ. ಆ ತೇಜವೇ ಜ್ಞಾನದ ಮೇಲೆ ಬೀಳುವದು."

ಹಳ್ಳಿಗಳಲ್ಲಿ ಯಾಕೋ ಏನೋ ತಂಬಾಕಿನ ವ್ಯಸನವು ಮಿತಿಮೀರುತ್ತಾ ಇದೆ. ಸಿಗರೇಟುಗಳ ಪ್ರಸಾರವೂ ಬಲವಾಗುತ್ತಾ ಇದೆ. ನಿಜವಾಗಿ ನೋಡಿ ದರೆ ಅವರ ಗಳಿಕೆಯನ್ನೂ ಖರ್ಚಿನ ಬಾಬುಗಳಾದ ಅರಿವೆ-ಅಂಚಡಿ, ಚಹ-ಫರಾಳ, ಬೀಡಿ-ಸಿಗರೇಟು ಇವುಗಳನ್ನು ನೋಡಿದರೆ ದಿನಾಲು ಸಾಲಮಾಡದೆ ನಿರ್ವಾಹವೇ ಇಲ್ಲ. ಸಾಲಮಾಡದಿದ್ದರೆ ಮನೆಯೊಳಗಿನ ಭಾಂಡೆ ವೊದ ಲಾದವುಗಳನ್ನು ಮಾರಬೇಕು, ಇಲ್ಲವೆ ಅಡವು ಇಡಬೇಕು. ದೊಡ್ಡದೊಡ್ಡ ಮನೆತನಗಳಲ್ಲಿ ಒಲೆಯೊಳಗಿನ ಬೆಂಕಿಯು ಕಡಿಮೆಯಾಗುತ್ತ ಬಂದಂತೆ ಚಹದಂಗಡಿಗಳು ಹೊಸತಾಗಿ ಹೊತ್ತುತ್ತಲೇ ಇವೆ. ಹೊಟ್ಟೆಯೊಳಗಿನ ಬೆಂಕಿಯು ತಣ್ಣಗಾಗುತ್ತಲೂ ಹೊಟ್ಟೆಕಿಚ್ಚು ಪ್ರಖರವಾಗುತ್ತಲೂ ನಡೆ ದದ್ದನ್ನು ನೋಡಿದರೆ ನಿಜವಾಗಿ ಅಳಬೇಕಾಗುತ್ತದೆ. ಮಾಡುವವರೇನೋ ಘನಮನಿಸದೆ ಇರುತ್ತಾರೆ. ಮನೆಮನೆಗೂ ಚಹದ ಪ್ರಸ್ತಗಳಾಗುತ್ತಲೂ ಜನರು ದುರ್ವ್ಯಸನಗಳ ಬಲೆಯಲ್ಲಿ ಬೀಳುತ್ತಲೂ ನಡೆದಿರುವದರಿಂದ ಉಪ ದೇಶಮಾಡಿ ಅವರನ್ನು ಹಾದಿಗೆ ತರುವುದೊಂದು ದೊಡ್ಡ ದೇಶಕಾರ್ಯವೇ ಅಲ್ಲವೇ? ಅಂಥ ಕಾರ್ಯವನ್ನು ರೇವಣಸಿದ್ದಪ್ಪನವರು ಒಂದು ಹಳ್ಳಿಯ ಮಟ್ಟಿಗಾದರೂ ಮಾಡಿದರು. ಅವರು ಮಾಡಿದ್ದು ಇದೊಂದೇ ಕೆಲಸವಲ್ಲ. ಇನ್ನೂ ಇವೆ. ಅವನ್ನು ಹೇಳುವೆ. ಹತ್ತರಿಕೆಯು ಮಧ್ಯಮತರಗತಿಯ ಊರು. ಅಂಥಲ್ಲಿ ದುರ್ವ್ಯಸನಾದಿಗಳು ಪ್ರಬಲವಾಗಿ ಬೆಳೆದದ್ದು ಆಶ್ಚರ್ಯ ವಲ್ಲ. ರೇವಣಸಿದ್ದಪ್ಪನವರು ಮನಸ್ಸಿನ ಮೇಲೆ ತೆಗೆದುಕೊಂಡು ಆ ಆ ಜನ ರಲ್ಲಿ ಬೆರೆತು ಅವರ ವ್ಯಸನಗಳನ್ನು ಬಿಡಿಸಿದ್ದು ಶ್ಲಾಘನೀಯವೇ ಅಲ್ಲವೇ? ಒಮ್ಮೆ 'ಸಂತೆಸೌದಿ' ಎಂಬ ಹಳ್ಳಿಗೆ ಸಪ್ತಾಹನೋಡಲಿಕ್ಕೆ ಹೋಗಿದ್ದರು. ಅಲ್ಲಿ ಗಾಂಜಿತಂಬಾಕುಗಳ ಬಿರುದು ಕಟ್ಟಿಕೊಂಡವರ ಮೇಳವೇ ಇತ್ತು. ಅದನ್ನು ಕಂಡು ಮಾಸ್ತರರಿಗೆ ಬಹಳ ಖೇದವೆನಿಸಿತು. ಆಗ ಅವರಿಗೆ ಉಪ ದೇಶಮಾಡಿ ತಲೆಯೊಡಕೊಂಡು ಅವರನ್ನು ಹಾದಿಗೆ ತಂದರು ಹಳ್ಳಿಯವರು ಬಿಳಿ ಛಾಯೆಯವರನ್ನು ನೋಡಿ ಬೆದರುತ್ತಾರೆ. ದೂರ ಸರಿಯುತ್ತಾರೆ.

ಆದರೆ ಇವರು ವಕ್ರವಲ್ಲಿಯೇ ಇರವೆ ಅವರೊಡನೆ ಸಲಿಗೆಯಿಂದಿದ್ದು ಅವರೊಡನೆ ಬೆರೆತು ಮಾತುಕತೆಗಳಲ್ಲಿಯೂ ಆಟನೋಟಗಳಲ್ಲಿಯೂ ಕೂಡಿ ಕೆಲಸಮಾಡಿ ಅವರ ಮೋರೆಯನ್ನು ಸಹಜವಾಗಿ ತಿರುಗಿಸಬಹುದು. ನಮ್ಮಲ್ಲಿಯ ಕಲಿತವರಿಗೂ ಹಳ್ಳಿಗರಿಗೂ ಮೇಳು ಬೀಳದಿರುವ ಕಾರಣವೇನು? ಸುಶಿಕ್ಷಿತರು ಅವರಲ್ಲಿ ಬೆರೆಯುವದಿಲ್ಲ ಬೆರೆತವರು ಬೀಡಿ ಚಹಗಳನ್ನು ಕಲಿಸಿಬೇಕೆಂದು ಉದ್ದೇಶವನ್ನು ಇಟ್ಟುಕೊಂಡಿರುವದಿಲ್ಲವಾದರೂ ಸಹವಾಸದ ಫಲದಿಂದ ಅದು ಹಾಗಾಗುತ್ತದೆ. ಸನ್ಯಾಸಿಯು ತೆಕ್ಕೆಗೆ ಬಿದ್ದರೆ ಮೈಯೆಲ್ಲ ಬೂದಿ!

ಹಳ್ಳಿಗರಲ್ಲಿ ಬೆರೆತು ಅವರ ಮನೋರಂಜನೆಯ ಕಾರ್ಯಗಳಲ್ಲಿಯೂ ಲಾವಣಿ—ಬಯಲಾಟ ಮೊದಲಾದವುಗಳಲ್ಲಿಯೂ ಅಪ್ರತ್ಯಕ್ಷವಾದರೂ ಭಾಗ ತೆಗೆದುಕೊಂಡು ತಮ್ಮ ಕಾರ್ಯವನ್ನು ಸಾಧಿಸಬಹುದು. ಆಟ—ಬಯಲಾಟದವರ ಮೇಳಗಳು ಊರೂರಿಗೂ ಇರುತ್ತವೆ. ಅವರ ಸಹಾಯಕ್ಕೆ ಕಲಿತವರು ಮೊದಲು ನಿಲ್ಲಬೇಕು. ಸಹಾಯವೆಂದರೆ ಹತ್ತಿದಷ್ಟು ದುಡ್ಡು, ಬೇಡವ ಸಾಮಾನು ಕೊಡುವುದಲ್ಲ. ಬಾಯಿಬಿಚ್ಚಿ ನಾಲ್ಕು ಚಲೋ ಮಾತುಗಳನ್ನಾಡಿದರೆ ಮೇಳದವರೆಲ್ಲರೂ ನಮ್ಮವರೇ ಆಗುವರು. ಆದರೆ ಅವರೊಡನೆ ಗೆಳೆತನ ಬೆಳೆಸಬಾರದು. ಅದರಿಂದ ಹೆಚ್ಚು ಕೆಲಸವಾಗುವದಿಲ್ಲ. ಮ. ಗಾಂಧಿಯವರಿಗೂ ಈ ಅನುಭವ ಬಂದಿದೆ. —"ಒಬ್ಬ ಸ್ನೇಹಿತನಿಂದ ಇನ್ನೊಬ್ಬನ ನಡತೆಯು ಯಾವಾಗಲೂ ಮಾರ್ಪಡುವುದರಿಂದ ಸುಧಾರಣೆಗೆ ಅವಕಾಶವು ಸ್ನೇಹಗಳಲ್ಲಿ ದುರ್ಲಭ. ಇಂಥ ಸಂದರ್ಭದಲ್ಲಿ ತುಂಬ ಸಲಿಗೆಯ ಸ್ನೇಹವನ್ನು ಯಾರೂ ಮಾಡಬಾರದೆಂದೇ ನನ್ನ ಅಭಿಪ್ರಾಯ." ಗೆಳೆತನವಿಲ್ಲದ ಪ್ರೀತಿಯಿಂದ ಮೇಳದವರೊಡನಿದ್ದು ಅವರನ್ನು ಕ್ರಮವಾಗಿ ತಮ್ಮ ಬೆನ್ನುಹಚ್ಚಿಕೊಳ್ಳಬಹುದು. ಮಾಸ್ತರರು ಆಟನಾಟಕಗಳಲ್ಲಿ ಸೇರುವ ಹುಡುಗರನ್ನು ಪರಿಪರಿಯಿಂದ ಬೋಧಿಸಿ ಹಾದಿಗೆ ತಂದರು. ಇದು ಬಲು ಕಠಿಣ ಕೆಲಸ ನೋಡಿರಿ. ಜನರ ಪ್ರವೃತ್ತಿಯೆಲ್ಲ ಆಟನಾಟಕಗಳಲ್ಲಿರುತ್ತಿರಲು 'ಅದುಬೇಡ' ಎಂದು ಹೇಳುವುದು ಸಾಹಸವೇ ಸೈ. ಅದರಿಂದ ಜನರು ವಿರುದ್ಧನಿಲ್ಲುವುದೂ ಉಂಟು. ಅವರು ಮೇಳದವರಿಗೆ ಉತ್ತಮ ಕಥೆಗಳನ್ನು ಒದಗಿಸಿಕೊಟ್ಟು ಅವರ ಒಳಗಿನ ವ್ಯವಸ್ಥೆಗಳನ್ನು ಸುಧಾರಿಸಿದರೆ ಹೆಚ್ಚು ಒಳ್ಳೆಯದು. ಆದರೆ ಪ್ರಯಾಸದ ಕೆಲಸ ಮಾತ್ರ. ಈಗಿನ ಹಳ್ಳಿಯ ಆಟನಾಟಕಗಳೆಂದರೆ ನಿರು

ದ್ಯೋಗಿ- ದುರ್ವ್ಯಸನಿಗಳ ಮೇಳ. ಇಂಥ ಮೇಳಗಳ ಗುರುಗಳು ಅವಿಶ್ರಾಂತ ವಾಗಿ ಪುರಿಗಳನ್ನು ಮಾಡುತ್ತಿರುವರು. ಇದಕ್ಕೆ ಹೇಸಿಯೇ ಮಾಸ್ತರರು ಹುಡು ಗರಿಗೆ ಉಪದೇಶಮಾಡಿ ಬಿಡಿಸಿರಬೇಕು. ಕುಳಿತಲ್ಲಿಯೇ ಕುಳಿತು 'ಅದು ಬೇಡ' ವೆನ್ನುವದಕ್ಕಿಂತ ಅವರೊಡನೆ ತಾನೂ ಕುಣಿದಾಡಿ ಮಹಾದೇವನು ಭಸ್ಮಾ ಸುರನನ್ನು ಕೊಂದಂತೆ ಜನರನ್ನು ಹಾದಿಗೆ ತರಬಹುದಾಗಿದೆ. ಮಾಸ್ತರರಿಗೆ ಕವಿತಾಶಕ್ತಿಯು ತಕ್ಕಮಟ್ಟಿಗಿತ್ತು. ಆದರಿಂದ ಅವರು ಅನೇಕಕೀರ್ತನಗಳನ್ನು ರಚಿಸಿಕೊಟ್ಟು ಕೀರ್ತನವನ್ನು ಹೇಳಿಸಹತ್ತಿದರು. ವ್ಯಾಖ್ಯಾನ ನಾಟಕ ಮೊದಲಾದವುಗಳಿಗಿಂತ ಕೀರ್ತನದಿಂದಲೇ ನಮ್ಮ ಜನರ ಮೇಲೆ ಒಳ್ಳೆಯ ಪರಿಣಾಮವಾಗುತ್ತ ಬಂದಿದೆಯೆಂದು ಬಲ್ಲವರು ಹೇಳುತ್ತಾರೆ. ಆದರೆ ಈಗ ವಿದ್ಯೆ, ಪರಿಸ್ಥಿತಿ, 'ಸಂಸ್ಕಾರಗಳು ಬೇರೆಯಾಗಿದ್ದರಿಂದ ಬರಿಯ ಕೀರ್ತನಗಳ ಮೇಲೆ ಕೈಯೂರಿಕೊಂಡು ಕುಳ್ಳಿರದೆ ವ್ಯಾಖ್ಯಾನ-ನಾಟಕಗಳನ್ನೂ ಬಳಸಿ ಕೊಂಡು ನಮ್ಮ ಉದ್ದೇಶವನ್ನು ಕೊನೆಗಾಣಿಸಬಹುದಾಗಿದೆ. ರೇವಣಸಿದ್ಧಪ್ಪ ನಾದರೊ ಕೀರ್ತನವೆಂಬ ಒಂದು ವಿಷಯವನ್ನು ಇಟ್ಟುಕೊಂಡಿದ್ದರು. ಅವರು ಬೇರೆ ಬೇರೆ ಮೂರು ನಾಲ್ಕು ಕೀರ್ತನಗಳನ್ನು ರಚಿಸಿದ್ದಾರೆ.

ಹೋಳೀಹುಣ್ಣಿವೆಯ ಧೂಳಾಟದ ದಿವಸ ಕೆಲವು ಜನ ಪ್ರಮುಖರು ನೆರೆದು ಮನದೊಳಗೊಂದು ಮಂಡಿಗೆಯನ್ನು ಮಾಡಿದರು. ಮಾಸ್ತರರನ್ನೆತ್ತಿ ಕತ್ತೆಯ ಮೇಲೆ ಕುಳ್ಳಿರಿಸಬೇಕು. ಮೇಲೆ ರಾಡಿಯನ್ನು ಒಗೆಯಬೇಕು. ಅವರು ಮಾಸ್ತರರ ಮನೆಗೆ ಬರುವಷ್ಟರಲ್ಲಿ ಮಾಸ್ತರರು ಬಾಗಿಲು ಹಾಕಿ ಕೊಂಡು ಶಿವಪೂಜೆಗೆ ಕುಳಿತಿದ್ದರು. ಒಳಗೆ ಹೋಗುವುದಕ್ಕೆ ಯಾರಿಗೂ ಧೈರ್ಯವಾಗಲಿಲ್ಲ. ಹೊರಗೇ ನಿಂತರು. ಪೂಜೆ ಮುಗಿದ ಬಳಿಕ ಮಾಸ್ತ ರರೇ ಹೊರಗೆ ಬಂದರು. ಅವರನ್ನು ನೋಡಿದ ಕೂಡಲೇ ಜನರ ಚೇತನವೇ ಕುಗ್ಗಿದಂತಾಗಿ ತಾವಾಗಿಯೆ ಹಿಂದಿರುಗಿದರು. ಆ ವೃತ್ತಾಂತವನ್ನೆಲ್ಲ ಕೇಳಿ ರೇವಣಸಿದ್ಧಪ್ಪನವರು ವಿಸ್ಮಯಪಟ್ಟರು. ಅಂಥ ಅಪವಿತ್ರ ಹೇಸಿ ಕಾರ್ಯ ವನ್ನು ಬಿಡಿಸಬೇಕೆಂದು ಕೆಲವು ವಿದ್ಯಾರ್ಥಿಗಳಿಗೆ ಜಂಗಮ ವೇಷ ಹಾಕಿ ಊರಲ್ಲಿ ಕಳಿಸಿದರು. ಹುಡುಗರು ಅಲ್ಲಲ್ಲಿಗೆ ಮಾಸ್ತರರು ಕಲಿಸಿದ ಸಂಭಾ ಷಣೆಗಳಿಂದಲೂ ನೀತಿಯ ಮಾತುಗಳಿಂದಲೂ ಜನರ ತಲೆಯೊಳಗಿನ ಜಿಡ್ಡು ಇಳಿಸಿದರು. ಅದೇ ಹಬ್ಬದಲ್ಲಿ ಮತ್ತೊಮ್ಮೆ ಕೆಲವು ಪ್ರಮುಖ ರಸಿಕರು ಜೋಗತಿಯರ ಹಾಡುಹಚ್ಚಿ ಕೇಳುತ್ತ ಕುಳಿತಿದ್ದರು. ಅವರ ಹಾಡುಗಳು

ಸರ್ಗಾದ ರೂಪದವು. ಭಾಷೆಯೂ ಬೋಧೆಯೂ ಬೀಭತ್ಸವಾದ ಅಪಶಬ್ದ ಗಳಿಂದ ಪರಿಪೂರ್ಣವಾಗಿದ್ದವು. ಮಾಸ್ತರರು ಅವನ್ನು ನೋಡಿ ಕಸಿಕರ ಪಟ್ಟು, ಆ ಆ ಜನರನ್ನು ಕರೆಯಿಸಿ ಹೇಳಿ-ಹೇಳಿ ಇನ್ನೊಮ್ಮೆ ಆಗದಂತೆ ವ್ಯವಸ್ಥೆ ಮಾಡಿಸಿದರು. ಮಾಸ್ತರರೆಂದು 'ಅವ್ವಾಳಿ' ಗಳೆಂದೂ ಯಾವು ದಾದರೂ ಅಧಿಕಾರ ಕೊಟ್ಟರೆ ಹಳ್ಳಿಗಳಲ್ಲಿ ಮಾಸ್ತರರಿಗೆ ಸುಖವಾಗುವದೆಂದೂ ವಟವಟಿಸುವವರು ರೇವಣಸಿದ್ದಪ್ಪನವರ ಈ ಕೃತಿಗಳನ್ನೂ ವರ್ಚಸ್ಸನ್ನೂ ನೆನೆದುಕೊಳ್ಳಲಿ.

"ಸದಾಚಾರ, ಸದ್ವ್ಯವಹಾರ, ವಿದ್ಯೆ, ಶಿಕ್ಷಣ ಇವುಗಳನ್ನು ಕೊಟ್ಟು ಬ್ರಾಹ್ಮಣನನ್ನೂ ಚಾಂಡಾಲನನ್ನೂ ಒಂದು ಸಮಕ್ಕೆ ತಂದು ನಿಲ್ಲಿಸಬೇಕು" ಎಂದು ಶ್ರೀವಿವೇಕಾನಂದ ಸ್ವಾಮಿಗಳು ಹೇಳುವುದರ ಹುರುಳನ್ನು ಇವರು ಚೆನ್ನಾಗಿ ಅರಿತಿದ್ದರು- ಬ್ರಾಹ್ಮಣನೂ ಚಾಂಡಾಲನೂ ಸರಿಯಾಗಬೇಕಾ ದರೆ ಎರಡು ಹಾದಿಗಳಿವೆ. ಬ್ರಾಹ್ಮಣನೇ ಇಳಿದು ಚಾಂಡಾಲನಾಗುವುದು ಒಂದು ಹಾದಿ! ಚಾಂಡಾಲನೇ ಏರಿ ಬ್ರಾಹ್ಮಣನ ಜೊತೆಯಲ್ಲಿ ಕುಳ್ಳಿರುವುದು ಮತ್ತೊಂದು ಹಾದಿ. ಒಳ್ಳೆಯದೂ ಹಿತಕಾರಿಯೂ ಆದ ಈ ಎರಡನೇ ಹಾದಿಯನ್ನೇ ನಮ್ಮ ಮಾಸ್ತರರು ಅನುಸರಿಸಬೇಕೆನ್ನುವವರು. ಆದರಿಂ ದಲೇ ಅವರು ಹೊಲೆಯ ಮುಂತಾದವರಿಗೆ ಬೋಧಿಸಿ ಸನ್ಮಾರ್ಗಕ್ಕೆ ಹಚ್ಚಲು ಪ್ರವರ್ತರಾಗಿದ್ದರು. ಮಹಾತ್ಮರು ಹೇಳುವ ಅಸ್ಪೃಶ್ಯತಾ ನಿವಾರಣೆಯೆಂ ದರೆ ಬರಿಯ ಮುಟ್ಟಿಸಿಕೊಳ್ಳುವುದಲ್ಲ. ಕೈಕೈ ಹಿಡಿದು ತಿರುಗುವದಲ್ಲ. ಊಟ-ಉಡಿಗೆ-ಹೆಣ್ಣು-ಗಂಡಿನ ಬಳಕೆ ಮಾಡುವುದಲ್ಲ. ಹಾಗೆ ಮಾಡಿದರೆ ಬ್ರಾಹ್ಮಣನೇ ಹೊಲೆಯನಾಗುವ ಹಾದಿಯನ್ನೇ ಹಿಡಿದಂತಾಗುತ್ತದೆ. ಅವ ರನ್ನು ಸುಶಿಕ್ಷಿತರನ್ನಾಗಿ ಮಾಡಿ ಧಾರ್ಮಿಕ, ನೈತಿಕ ತತ್ವಗಳ ಬೀಜ ಬಿತ್ತು ವುದೇ ನಿಜವಾದ ಅಸ್ಪೃಶ್ಯತಾ ನಿವಾರಣೆಯು.

ಹಳ್ಳಿಗಳ ಈಗಿನ ಪರಿಸ್ಥಿತಿಗೆ ವಾಚನಾಲಯ, ತರುಣ ಸಂಘ, ಗ್ರಾಮ ಪಂಚಾಯತಿ ಇವು ಅತ್ಯಗತ್ಯವಾಗಿ ಬೇಕು. ಅಶಿಕ್ಷಿತರಾದವರೂ ಅಲ್ಪ ಶಿಕ್ಷಿತರೂ ಹಳ್ಳಿಗಳಲ್ಲಿ ಹೆಚ್ಚು. ಅಂಥವರು ಶಿಕ್ಷಣವನ್ನು ಬೆಳೆಸಿಕೊಳ್ಳಲಿಕ್ಕೆ ವಾಚನಾಲಯವೂ ಪುಸ್ತಕ ಸಂಗ್ರಹವೂ ಎಲ್ಲ ಜನರ ನಡುವಿರಬೇಕು. ಜನರಲ್ಲಿ ಓದುವ ಒಲವನ್ನೂ ಕಲಿಯುವ ಲವಲವಿಕೆಯನ್ನೂ ಉಂಟು ಮಾಡುವ ಚಟುವಟಿಕೆಯ ತರುಣ ಸಂಘಗಳೂ ಬೇಕು. ಇವನ್ನೆಲ್ಲ ಮಾಡು

ವುದು ಒಬ್ಬನಿಂದ ಸಾಧ್ಯವಿಲ್ಲ. ಆದ್ದರಿಂದ ಹಲವು ಜನರಿದ್ದಲ್ಲಿಗೆ ಅಂದರೆ ಪೇಳಗಳಿಗೆ ಸೇರಿ ಆ ಮೇಲೆ ವಾಚನಾಲಯವನ್ನಾಗಲಿ ಸಂಘವನ್ನಾಗಲಿ ಮಾಡಿಕೊಳ್ಳಬಹುದು. ನಗರಗಳ ವಾಚನಾಲಯಗಳಿಗಿಂತ ಹಳ್ಳಿಯ ವಾಚನಾಲಯಗಳು ಒಂದು ಹೆಜ್ಜೆ ಮುಂದೆ ಅನ್ನಬೇಕು. ನಗರಗಳಲ್ಲಿ ಹನ್ನೆರಡು ಭಾಷೆಯ ಪುಸ್ತಕಗಳೂ ವರ್ತಮಾನ ಪತ್ರಗಳೂ ದಿಕ್ಕು ತಪ್ಪಿಸುತ್ತವೆ. ಹಳ್ಳಿಗಳಲ್ಲಿ ಕನ್ನಡ ಪತ್ರ-ಪುಸ್ತಕಗಳೇ ವಿಶೇಷ. ಅಂತೇ ಹಳ್ಳಿಗಳು ನಾಡಿನ ತಿರುಳು ಎನ್ನುವುದು. ಇದಕ್ಕಾಗಿಯೇ ಹತ್ತರಿಕೆಯಲ್ಲಿ ಒಂದು ವಾಚನಾಲಯವೂ ಒಂದು ತರುಣ ಸಂಘವೂ ಸ್ಥಾಪಿತವಾದವು. ವಾಚನಾಲಯಕ್ಕೆ ಸಣ್ಣ ದೊಡ್ಡ ಉಪಯುಕ್ತ ಪುಸ್ತಕಗಳನ್ನು ತರಿಸಿಟ್ಟರು. ಇಂಥ ಸಾರ್ವಜನಿಕ ಕಾರ್ಯಗಳನ್ನು ಅವರು ದೊಡ್ಡ ದೊಡ್ಡ ವಿದ್ಯಾರ್ಥಿಗಳಿಂದ ಮಾಡಿಸುತ್ತಿದ್ದರು. ಸಾರ್ವಜನಿಕ ಕಾರ್ಯಗಳನ್ನು ಮಾಡಲಿಕ್ಕೆ ಕಲಿಸುವುದು ಸಹ ಉಪಯುಕ್ತ ಶಿಕ್ಷಣವೇ ಅಲ್ಲವೇ ?

ಇದು ವ್ಯಾಖ್ಯಾನಯುಗವಾದ್ದರಿಂದ ನಾಲ್ಕು ಮಂದಿಯಲ್ಲಿ ಮಾತಾಡುವ ಧೈರ್ಯವು ಪ್ರತಿಒಬ್ಬನಿಗೂ ಇರುವುದು ಅವಶ್ಯವು. ಆ ಧೈರ್ಯ ಬರಬೇಕಾದರೂ ಅಭ್ಯಾಸಬೇಕು. ಅಭ್ಯಾಸವು ವಿದ್ಯಾರ್ಥಿಗಳಿಗೆ ಸಾಧ್ಯವಿದ್ದಷ್ಟು ಉಳಿದವರಿಗೆ ಸಾಧ್ಯವಾಗದು. ರೇವಣಸಿದ್ದಪ್ಪನವರು ವಾರವಾರಕ್ಕೆ ಜನರನ್ನು ನೆರೆಯಿಸಿ ವಿದ್ಯಾರ್ಥಿಗಳಿಂದ ಸಾಮಾಜಿಕ ಔದ್ಯೋಗಿಕ ಮೊದಲಾದ ಉಪಯುಕ್ತ ವಿಷಯಗಳ ಮೇಲೆ ವ್ಯಾಖ್ಯಾನ ಹೇಳಿಸುವರು. ಅದು ಕಡೆತನಕ ಸಾಗುವಂಥದಲ್ಲವಾದರೂ ವರುಷಾರು ತಿಂಗಳು ನಡೆದರೂ ಪ್ರಯೋಜನವು ಕಡಿಮೆಯಾಗದು. ಅಮೃತದ ಒಂದೇ ಹನಿಯು ಬಾಯಲ್ಲಿ ಬಿದ್ದರೂ ನಮಗದು ಹಿತವನ್ನುಂಟು ಮಾಡುವದಿಲ್ಲವೇ ? ವಿದ್ಯಾರ್ಥಿಗಳಿಗೆ ಅಭ್ಯಾಸವೂ ಆಯ್ತು; ಕೇಳುವವರಿಗೆ ಉಪದೇಶವೂ ಆಯ್ತು. ಸ್ವತಃ ತಾವು ಹೇಳುವ ಪ್ರಸಂಗ ಬಂದರೆ ಮಾಸ್ತರರು ಭಕ್ತಿ-ಜ್ಞಾನಗಳ ಸಂಬಂಧವಾಗಿ ಹೇಳುವರು. ಧರ್ಮದ ಬಗೆಗೆ ಹೇಳುವುದಾದರೆ ಒಂದು ಧರ್ಮವನ್ನು ಹೊಂದಿಕೊಂಡು ಹೇಳದೆ ಎಲ್ಲರಿಗೂ ಸರಿ ಬೀಳುವ ಧರ್ಮದ ಸಾಮಾನ್ಯ ತತ್ವಗಳನ್ನು ಬೋಧಿಸುವರು.

ಇವರ ಕಡೆಗೆ ಕೆಲಕೆಲವು ನ್ಯಾಯಗಳೂ ಬರುತ್ತಿದ್ದವು. ನಿಷ್ಪಕ್ಷಪಾತತನದಿಂದಲೂ, ದುಡ್ಡು ಖರ್ಚಿಲ್ಲದೆಯೂ ಕೆಲಸವಾಗುವ ಇವರ ನ್ಯಾಯಾ

ಸ್ಥಾನಕ್ಕೆ ಜನರಾದವರು ಬಂದೇ ಬರುತ್ತಿದ್ದರು. ಬಂದ ನ್ಯಾಯವು ಮುಗಿಯದೆ ಹೋಗುವದಿಲ್ಲ. ಇಂಥ ಅನೇಕ ಸಾರ್ವಜನಿಕ ಕಾರ್ಯಗಳನ್ನು ಬೇಸರವಿಲ್ಲದೆ ಮಾಡುವವರು. "ಸಾರ್ವಜನಿಕ ಕಾರ್ಯಗಳು ಸಾವಕಾಶವಾಗಿ ಮಾಡತಕ್ಕ ಕರ್ತವ್ಯ ಕರ್ಮಗಳು" ಎಂದು ತಿಳಿದಿದ್ದರು. ಅಂತೇ ಅವರ ಮನಸ್ಸು, ಪರಹಿತದ ಕೆಲಸಗಳಲ್ಲಿ ಎಳೆಯುತ್ತಿತ್ತು. "ಪರಾರ್ಥವಾದ ಕರ್ಮಫಲದಿಂದ ಮನಸ್ಸಿನ ಡೊಂಕು-ಪಂಕಗಳೆಲ್ಲ ನೆಟ್ಟಗಾಗಿ ಮನುಷ್ಯನು ಅಕಪಟದಿಂದ ಪರಹಿತಕ್ಕಾಗಿ ಜೀವವನ್ನು ತೇಯುವುದಕ್ಕೆ ಹೊರಡುವನು" —ಶ್ರೀ ವಿವೇಕಾನಂದರು.

ಯಾವ ಕಾರ್ಯವಾದರೂ ಧರ್ಮಕ್ಕೆ ಹೊಂದಿಕೊಂಡರೆ ಅದಕ್ಕೆ ಮಹತ್ವ ಹೆಚ್ಚು. ಮಾಸ್ತರರು ಮಾಡುವ ಕಾರ್ಯಗಳೆಲ್ಲ ಧರ್ಮವೆಂದೇ ಎಣಿಸಲ್ಪಡುತ್ತಿದ್ದವು. ಅವರ ಶಿಷ್ಯನೊಬ್ಬನು ವ್ಯಭಿಚಾರಕ್ಕೆ ಬಿದ್ದು ಪಶ್ಚಾತ್ತಾಪಪಟ್ಟು ರೇವಣಸಿದ್ದಪ್ಪನವರಿಗೆ ಶರಣು ಬಂದರು. ಆ ತಪ್ಪಿತಕ್ಕೆ ಪ್ರಾಯಶ್ಚಿತ್ತವನ್ನು ಮಾಸ್ತರರು ಶಿಷ್ಯನಿಗೆ ಹೇಗೆ ಹೇಳಿದರೆಂದರೆ–"ದಿನಾಲು ತಪ್ಪದೆ ಅರವತ್ತುಮೂರು ಪತ್ರಿಯ ದಳಗಳನ್ನು ಪುರಾತನರ ಹೆಸರಿನಿಂದ ಇಷ್ಟಲಿಂಗಕ್ಕೆ ಏರಿಸಬೇಕು. ಎರಡು ತಿಂಗಳುಗಳ ವರೆಗೆ.''

ಇವರಿಗನ್ನಬೇಕು ಹಳ್ಳಿಯ ಮುಂದಾಳು—ಎಂದು. ದೇವರು ದಯೆ ಪಾಲಿಸಿದ ಅಧಿಕಾರದ ಸದುಪಯೋಗ ಮಾಡಿಕೊಂಡರೆ ಆ ಅಧಿಕಾರಿಗೆ 'ಗುರು' ಎಂದರೂ ಅನ್ನಬಹುದಲ್ಲವೇ ?

**ಹುಸಿವವನ ಬೇಹಾರ । ಕಸಹತ್ತಿದಾರಂಭ**
**ವಿಷಯವುಳ್ಳವನ ಗುರುತನ । ವಿವು ಮೂರು ।**
**ಮುಸಿಮುಣ್ಣು ಕಾಣೊ ಸರ್ವಜ್ಞ ॥**

---

# ೭. ಆದರ್ಶ ಜೀವನ

**( ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ಸ್ವರ್ಗಲೋಕ. ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಕೂಡಲಸಂಗಮದೇವಾ ನೀವೇ ಪ್ರಮಾಣ.**

—ಶ್ರೀ ಬಸವಣ್ಣನವರು.)

ತೀರ ಬಡತನದಲ್ಲಿ ಹುಟ್ಟಿ ಬಂದು ಹಳ್ಳಿಯಲ್ಲಿ ಮಾಸ್ತರಿಕೆಯನ್ನು ಮಾಡುತ್ತ ನಾಲ್ಕು ಜನರು ಅಹುದು ಎನ್ನುವಂತೆ ಧರ್ಮಕ್ಕೂ ನೀತಿಗೂ ತಳಕು ಹಾಕಿ ಕೀರ್ತಿಶರೀರಿಗಳಾದ ರೇವಣಸಿದ್ದಪ್ಪನವರು ಆದರ್ಶಭೂತ ರಾಗಿಯೇ ಇದ್ದರು. ಅವರು ಹಾದಿ ಬಿಟ್ಟವರನ್ನು ಹಾದಿಗೆ ತರುವುದಕ್ಕೆ ಬೋಧನೆ ಮೊದಲಾದ ಔಷಧಗಳನ್ನು ಉಪಯೋಗಿಸಿದರು. ಅವರು ಬರಿಯ ಆದರ್ಶ ಪುರುಷರಾಗಿಯೇ ಇರಲಿಲ್ಲ. ಬೋಧಕರೂ ಆಗಿದ್ದರು. ಭಗವಾನ್ ಬುದ್ಧದೇವನು ಹೇಳುವ " ಬೋಧಕನಾಗಬೇಡ. ಆದರ್ಶ ಪುರುಷನಾಗು " ಎಂಬ ತತ್ವವನ್ನು ಮೊದಲು ಅನುಸರಿಸಿದರು ಆದರ್ಶಪುರುಷರಾಗಿ ಆ ಮೇಲೆ ಬೋಧಕರೂ ಆದರು.

ಮಾಸ್ತರಿಕೆಯ ಕೆಲಸವನ್ನು ನ್ಯಾಯವಾದ ರೀತಿಯಿಂದಲೂ ಯೋಗ್ಯವಾದ ಹಾದಿಯಿಂದಲೂ ಸಾಗಿಸಿಕೊಂಡು ಹೋಗುವರು. ಜನರಲ್ಲಿ ನೀತಿಯನ್ನು ಹಗುರಾಗಿ ಊರುವರು. ಅಕ್ಕಸಾಲಿಗನು ಕಿವಿ ಚುಚ್ಚಿದಂತೆ! ಇವೆಲ್ಲ ಕೃತಿಗಳನ್ನಂತೂ ಈ ಮೊದಲೇ ಹೇಳಿದೆ. ಆದರ್ಶಗುಣಗಳೆಂಬ ಚಿಕ್ಕೆಗಳಲ್ಲಿ ಒಳ್ಳೆಯ ಮಿರುಗುವ ಚಿಕ್ಕೆಗಳು ನಮ್ಮ ಕಣ್ಣಿಗೆ ಕಾಣಿಸಿಲ್ಲ. ಮನಸ್ಸಿಗೆ ಅನಿಸಿಲ್ಲ. ಅವುಗಳನ್ನು ಹೇಳಿಕೊಟ್ಟರೆ ಮಾಸ್ತರರ ಆದರ್ಶ ಗುಣಗಳನ್ನು ಹೇಳಿದಂತಾಯ್ತು. ಆದರ್ಶ ಗುಣಗಳೂ ಆಚಾರಗಳೂ ಸಾಮಾನ್ಯರ ಜೀವನಕ್ಕೆ ಬಲು ಸಹಾಯಕವಾಗಿವೆ. ನುಡಿಗಿಂತ ನಡೆ ಹೆಚ್ಚಿನದು ಎಂಬುವನ್ನೇ ಆದರ್ಶತೆಯು ಸಾರುತ್ತದೆ. ‘‘ಗ್ರಂಥಗ್ರಂಥಾಂತರಗಳನ್ನೆಲ್ಲ ಓದಿಕೊಂಡಂಥ ಮನುಷ್ಯನು ಹತ್ತು ವರುಷಗಳ ವರೆಗೆ ಪುರಾಣ ಪುಣ್ಯ ಪ್ರವಚನಗಳನ್ನು ಹೇಳಿದ್ದು ಒಂದೆ. ಮಹಾತ್ಮನು ಒಂದೇ ಒಂದು ನಿಮಿಷ ಆಚರಣೆಯಲ್ಲಿದ್ದುದ್ದು ಜನರು ನೋಡಿದ್ದು ಒಂದೇ. ”—ಸ್ವಧರ್ಮ.

ಧರ್ಮಗಳೆಲ್ಲ ದೇವರನ್ನು ತಿಳಿಯುವ ಬೇರೆ ಬೇರೆ ಹಾದಿಗಳೆಂದು, ಪೂರ್ಣ ವಿಚಾರಿಗಳು ಎದೆಬಿಚ್ಚಿ ಹೇಳುತ್ತಿದ್ದಾರೆ. ಒಂದೂವರಿಗೆ ಹೋಗಲಿಕ್ಕೆ ಏಸೋ ದಾರಿಗಳಿರುವಂತೆ! ಶಾಸ್ತ್ರರಾದರೂ ಹಾಗೇ ತಿಳಕೊಂಡಿದ್ದರು. ಈಗ ಧರ್ಮವಂತರೂ ಧರ್ಮನಿಷ್ಠರೂ ಎಂದು ಹೇಳಿಸಿಕೊಳ್ಳುವವರು ಜನರನ್ನು ತಮ್ಮ ಧರ್ಮದಲ್ಲಿ ಎಳಕೊಳ್ಳುವುದನ್ನೂ ಅವರ ಧರ್ಮದಲ್ಲಿ ಅಪನಂಬಿಗೆ ಹುಟ್ಟಿಸುವುದನ್ನೂ ಮಾಡುತ್ತಾರೆ. ಇದೇ ತಮ್ಮ ಕರ್ತವ್ಯವೆಂದು ತಿಳಕೊಳ್ಳುತ್ತಾರೆ. ಇಂಥ ವಿಶ್ವಾಸಘಾತಕಿಗಳ ಸ್ಮಾರಕ ಮೂರ್ತಿಗಳನ್ನು ಮಾಡಿ ನಿಲ್ಲಿಸುವುದಕ್ಕೂ ಅವರ ಅನುಯಾಯಿಗಳು ಹೇಸುವದಿಲ್ಲ. ಮರೆಯುವದಿಲ್ಲ. ಹಿಂದುಗಳನ್ನು ಕ್ರಿಸ್ತರೂ ಮುಸಲ್ಮಾನರೂ ಕುಲಗೆಡಿಸುವುದನ್ನು ನೋಡಿದರೆ ಯೇಸುಕ್ರಿಸ್ತನನ್ನೂ ಮುಹಮ್ಮದ ಪೈಗಂಬರನನ್ನೂ ಅಪಮಾನ ಮಾಡುತ್ತಾರೆಂದು ಅನಿಸುವದು. ಧರ್ಮಗಳೆಲ್ಲ ಸತ್ಯವೆಂದು ಮನಗಂಡವನು ಬೇಕಾದದ್ದನ್ನು ಅನುಸರಿಸಿದರೆ ಚಂದಕಾಣಿಸೀತು. ಆದರೂ ತಾನು ಹುಟ್ಟಿಬಂದ ಧರ್ಮವನ್ನು ಬದಲಿಸುವುದು ಯೋಗ್ಯವಲ್ಲ. ವಂಶಾನುವಂಶ ಸಂಸ್ಕಾರವಾಗುತ್ತ ಬಂದ ಸ್ವಧರ್ಮದಲ್ಲಿ ಅಪನಂಬಿಗೆಯೂ ತಿರಸ್ಕಾರವೂ ಹುಟ್ಟಿದರೆ ಹೊಸ ಧರ್ಮದಲ್ಲಿ ಹೇಗೆ ಮೇಳು ಕಲೆಯುವುದೋ ದೇವರೆಗೇ ಗೊತ್ತು. ವಿವೇಕಾನಂದರು, ವಿಲಾಯತಿಯ ಕಡೆಗೆ ಹೋದಾಗ ಎಷ್ಟೋ ಸಾಹೇಬ ಜನರು 'ಹಿಂದು ಧರ್ಮದ ದೀಕ್ಷೆ ಕೊಡಿರಿ ನಮಗೆ' ಎಂದು ಬೇಡಿಕೊಂಡರು. ಆದರೆ ಸ್ವಾಮಿಗಳು ಅದಕ್ಕೆ ಒಪ್ಪಲಿಲ್ಲ. "ನಾನು ನನ್ನ (ಹಿಂದು) ಧರ್ಮವನ್ನು ಚೆನ್ನಾಗಿ ಅಭ್ಯಾಸ ಮಾಡಿ ನಿಮ್ಮ ಮುಂದೆ ವ್ಯಾಖ್ಯಾನ ಮಾಡಿದೆನಾದ್ದರಿಂದ ನಿಮ್ಮ ಧರ್ಮಕ್ಕಿಂತ ಹಿಂದು ಧರ್ಮವು ಹೆಚ್ಚಿನದೆನಿಸಿದೆ. ನೀವೂ ನಿಮ್ಮ ಧರ್ಮವನ್ನು ಚೆನ್ನಾಗಿ ಅಭ್ಯಾಸ ಮಾಡಿರಿ. ಅದರಲ್ಲಿಯೂ ನಮ್ಮ ತತ್ವಗಳೆಲ್ಲಾ ಹೊರಡುವವು." ಎಂದು ಹೇಳಿದರಂತೆ! ಮುತ್ತಾರಾದರೂ ಕಿರುಕಳುಗಳಾಗಿದ್ದರೆ ಹುಚ್ಚಾಟವನ್ನೆಬ್ಬಿಸಿ ಬಿಡುತ್ತಿದ್ದರು ಪಾದ್ರಿಗಳೂ ಮುಸಲ್ಮಾನರೂ ಕೆಲಗೆಡಿಸಲಿಕ್ಕೆ ಎದ್ದಾಗ ಹಿಂದುಗಳಾದವರೋ ತಮ್ಮನ್ನು ಉಳಿಸಿಕೊಳ್ಳುವುದಕ್ಕೆಂದು ಯತ್ನಿಸದೆ ಗತ್ಯಂತರವೇ ಇಲ್ಲ. ರೇವಣಸಿದ್ದಪ್ಪನವರಿಗೆ ಒಬ್ಬ ಮುಸಲ್ಮಾನ ಗೆಳೆಯನಿದ್ದನು. ಅವನು ಲಿಂಗಾಯತ ಮತವನ್ನು ತುಂಬಾ ನಂಬಿದ್ದನು. ಲಿಂಗಾಯತನಾಗಬೇಕೆಂಬ ಲವಲವಿಕೆಯೂ ಆತನಲ್ಲಿ ಹುಟ್ಟಿತ್ತು. ಅವನು ತನ್ನ ಮುಸಲ್ಮಾನೀ ಧರ್ಮ

ವನ್ನೂ ತುಂಬ ನಿಂದಿಸುತ್ತಿದ್ದನು. ತನ್ನ ಧರ್ಮವನ್ನು ತಾನು ಹಳಿದರೂ ಮಾಸ್ತರರಿಗೆ ಸಹನವಿರಲಿಲ್ಲ. ಎಲ್ಲ ಮತಗಳೂ ಸರಿಯಾಗಿವೆಯೆಂದೂ ಯಾವ ಮತದಲ್ಲಿ ಹುಟ್ಟಿರುವಿರೋ ಆ ಮತದಂತೆ ನಡೆಯುವುದೇ ಶ್ರೇಯಸ್ಕರವೆಂದೂ ಬೋಧಿಸಿ ಸಮಾಧಾನಗೊಳಿಸುವರು. ಸ್ವಧರ್ಮದ ಪರಿವೆಯಿಲ್ಲದೆ ಹಳಿಯುವವರು ಪರಧರ್ಮವನ್ನು ಸ್ವೀಕರಿಸದೆ ಇಂದಿಲ್ಲ ನಾಳೆಯಾದರೂ ಬಾಯ್ತುಂಬ ನಿಂದಿಸುವರು- ಜಯಚಂದನು ತನ್ನ ಮಗಳು ಸಂಯುಕ್ತೆಯು ರಂಡೆಮುಂಡೆಯಾದರೂ ಚಿಂತೆಯಿಲ್ಲವೆಂದು ಪೃಥ್ವೀರಾಜನನ್ನು ಮಣ್ಣುಗೂಡಿಸಿದವನು ಘೋರೀಮಹಮ್ಮದನೊಡನೆ ಗೆಳೆತನದಿಂದ ನಡಕೊಳ್ಳಬಹುದೇ ?

ರೇವಣಸಿದ್ದಪ್ಪನವರು ಸಹನಶೀಲರು. ಸಿಟ್ಟಿಗೆ ಬಂದುದನ್ನು ಯಾರೂ ಕಂಡಿಲ್ಲ. ಪರನಿಂದೆಗೆ ಕಿವಿಗುಡದೆ ಅಲ್ಲಿಂದ ಎದ್ದು ಹೋಗುವರು. "ಶುದ್ಧ ಬೀಜದ ಹೊಟ್ಟೆಯಲ್ಲಿ ರಸವುಳ್ಳ ಸುಂದರವಾದ ಹಣ್ಣುಗಳೇ ಹುಟ್ಟುವವು. ಬಾಯಲ್ಲಿ ಅಮೃತದ ಭಾಷೆಯು. ದೇಹವು ದೇವರ ಕಾರ್ಯಕ್ಕೆ ಅರ್ಪಿತವಾದದ್ದು. ಅಂಗವೆಲ್ಲ ನಿರ್ಮಲವಾದದ್ದು. ಮನಸ್ಸು ಗಂಗಾನದಿಯ ನಿರ್ಮಲ ನೀರಿನಂತೆ! ಅಹಹಾ! ಇಂಥವರನ್ನು ನೋಡಿದರೆ ತಾಪಗಳೆಲ್ಲ ಮಾಯವಾಗಿ ವಿಶ್ರಾಂತಿಯು ಯಾರಿಗೆ ಸಿಗಲಿಕ್ಕಿಲ್ಲ? '—ಸ್ವಧರ್ಮ.

"ನೋಟ ಭಂಗ ಪರಸತಿಯರ ಬೇಟ ಭಂಗ. ಪರಸತಿಯರ ಕೂಟ ಭಂಗ. ಅದೇನು ಕಾರಣವೆಂದರೆ ಮುಂದನರಿಯರಿಯದೆ ಕೆಟ್ಟರು, ಕೀಚಕ ರಾವಣೇಂದ್ರರು. ಅಖಂಡೇಶ್ವರಾ." "ಹೆಣ್ಮಕ್ಕಳೆಲ್ಲರೂ ಶಕ್ತಿದೇವಿಯ ಒಂದೊಂದು ರೂಪು" (ರಾಮಕೃಷ್ಣರು) ಎಂಬ ತತ್ವವನ್ನಿಟ್ಟುಕೊಂಡು ದೇವರೆಂಬ ಭಾವನೆಯಿಂದಾಗಲಿ ತಾಯಿಯೆಂಬ ಭಾವನೆಯಿಂದಾಗಲಿ ನೋಡಿದರೆ ಯಾರೂ ಅಲ್ಲೆನ್ನುವದಿಲ್ಲ. ಅದಕ್ಕೇ ಅನ್ನುವರು—"ತಾನು ಗರತಿಯಾದರೆ ಸೂಳೆಗೇರಿಯಲ್ಲಿ ಮನೆಕಟ್ಟಬಹುದು." ಪರಸ್ತ್ರೀಯರ ಕಡೆಗೆ ನೋಡದಿದ್ದರೆ ನಗದಿದ್ದರೆ ಕೆಲೆಯದಿದ್ದರೆ ಹೆಣ್ಣು ಕೊಡುವದಿಲ್ಲವಂತೆ! "ಅಕ್ಕಾಬಾಯಿಯಂಥಾ ಡೌಲಾ | ಪಕ್ಕಾ ಇಂವಾ ಗಂಡಸನಲ್ಲಾ" ಎಂದು ಹಾಡುವರಂತೆ!! ಇವೆಲ್ಲ ಚೇಷ್ಟೆಯ ನುಡಿಗಳು. ಇವನ್ನು ಯಾರು ಎಷ್ಟು ಪಾಲಿಸುವರೋ ಏನೋ. ಶ್ರೀರಾಮಕೃಷ್ಣರು ಉಪದೇಶ ಮಾಡಿದ ಮಾತನ್ನು ತರುಣರು ಅವಶ್ಯವಾಗಿ ಮನನ ಮಾಡತಕ್ಕಂಥದ್ದಾಗಿದೆ. "ಹೆಂಗ

ಳಲ್ಲಿ ಮಾತೃಭಾವವು ತಲೆದೋರುವ ವರೆಗೂ ಈಶ್ವರನಲ್ಲಿ ಶುದ್ಧ ಭಕ್ತಿ ಯುಂಟಾಗುವವರೆಗೂ ಅವರ ಹತ್ತಿರ ಪುರುಷರು ಸೇರದೆ ತುಂಬ ಎಚ್ಚರಿಕೆ ಯಿಂದಿರಬೇಕು. ಸ್ತ್ರೀಯರು ಪರಮ ಭಕ್ತೆಯರಾಗಿದ್ದರೂ ಅವರ ಸಂಪರ್ಕವು ತಕ್ಕುದಲ್ಲ." ರೇವಣಸಿದ್ದಪ್ಪನವರು ಓಣಿಯೊಳಗಿಂದ ಹೊರಟರೆ ಕೆಳಗೆ ಮೋರೆ ಮಾಡಿ ಮುಸುಕು ಹಾಕಿಕೊಂಡು ನಡೆಯುವರು. ಯಾವ ಹೆಣ್ಣು ಮಕ್ಕಳೊಡನೆ ಮಾತಾಡಿದರೂ ಅವ್ವ, ಅಕ್ಕ ಅನ್ನದೆ ಮಾತಾಡುವವರಲ್ಲ. ಭಯ ಸಂಕೋಚಗಳೂ ಅವರಲ್ಲಿ ಉಂಟಾಗುತ್ತಿದ್ದವು. ಅಂದರೆ ಅವರು ಹೆಂಗಸರನ್ನು ದ್ವೇಷಿಸುತ್ತಿದ್ದರೆಂದು ತಿಳಿಯಬಾರದು. ವಿನಯಶೀಲರೂ ಬಾಲಭಾವನೆಯುವರೂ ಆಗಿ ಮಾತಾಡುತ್ತಿದ್ದರು. ಕಾಲೇಜದಲ್ಲಿದ್ದಾಗ ಇವರ ಗೆಳೆಯರು ಅವರನ್ನು ಬಲು ಪೀಡಿಸುತ್ತಿದ್ದರು. ಇವರ ವಿಚಾರಗಳೆಲ್ಲ ಅವರಿಗೆ ಅವ್ಯವಹಾರ್ಯವಾಗಿ ಕಾಣುತ್ತಿದ್ದವು. ಇವರು ಹೆಂಗಸರ ಮಾತು ಹೊರಟಲ್ಲಿ ನಿಲ್ಲದೆ ಬೇರೆ ಕಡೆಗೆ ಹೋಗುತ್ತಿದ್ದುದರಿಂದ ಇವರ ಸ್ವಭಾವವನ್ನರಿತ ಗೆಳೆಯರು ಚೇಷ್ಟೆಗೆಂದು ಒಂದು ದಿನ ಒಂದು ಚಿತ್ರವನ್ನು ಕೈಯಲ್ಲಿ ಹಿಡಕೊಂಡು ಬಂದು ಅದು ಒಬ್ಬ ಮಹಾತ್ಮ ವ್ಯಕ್ತಿಯ ಚಿತ್ರವೆಂದು ಒಳ್ಳೊಳ್ಳೆ ಬಣ್ಣಿಸಿ ಮಾಸ್ತರರ ಮನದಲ್ಲಿ ನೋಡುವ ಬಯಕೆ ಹುಟ್ಟುವಂತೆ ಮಾಡಿದರು. ಆತುರತೆಯಿಂದ ನೋಡುತ್ತಾರೆ—ಅದೊಂದು ಹೆಂಗಸಿನ ನಾಚಿಗೆಯ ಚಿತ್ರ! ಕೇಳುವುದೇನು? ಗಳೆಯರೆಲ್ಲರ ಮೇಲೆ ಮುನಿಸು ತಾಳಿ ಕಣ್ಣೀರು ಸುರಿಸ ತೊಡಗಿದರು! ಈ ಅವಸ್ಥೆಯನ್ನು ಕಂಡು ಅವರ ಗೆಳೆಯರು ಮುಂದೆ ಎಂದೂ ಇಂಥ ಸಾಹಸಕ್ಕೆ ಕೈಹಾಕಲಿಲ್ಲ. ಅವರು ಹತ್ತರಕಿಗೆ ಹೋದ ಹೊಸದಾಗಿ ಮಠದಲ್ಲೇ ಉಣ್ಣುವ ಪ್ರಸಂಗವಿತ್ತು. ಇನ್ನೂ ಲಗ್ನವಾಗಿದ್ದಿಲ್ಲ. ತಾಯಿ ತೀರಿಕೊಂಡಿದ್ದಳು. ಜೊತೆಗೆ ಬರುವವರು ಯಾರೂ ಇರಲಿಲ್ಲ. ಕೈಯಿಂದ ಮಾಡಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಮಠದಲ್ಲಿ ಎರಡು ವರುಷ ಉಣ್ಣ ಬೇಕಾಯಿತು. ಅಷ್ಟು ದೀರ್ಘಕಾಲ ಮಠದಲ್ಲಿ ಉಂಡರೂ ಅಲ್ಲಿಯ ಹೆಣ್ಮ ಗಳ ಮೋರೆಯನ್ನು ಕಣ್ಣೆತ್ತಿ ನೋಡಿದ್ದಿಲ್ಲ. ಆಕೆಯ ಮೋರೆಗೆ ಹುಣ್ಣೋ ಏನೋ ಆದ ಬಗ್ಗೆ ಯಾರೋ ಮಾತು ತೆಗೆಯಲು, ಆ ಹೆಣ್ಮಗಳ ಮೋರೆ ಯನ್ನೇ ನೋಡಿಲ್ಲವೆಂದು ಹೇಳಿದರು. ಮತ್ತೆ ಯಾರಾದರೂ ಬೆರಿಕೆಯವ ರಾಗಿದ್ದರೆ ಏನಾದರೂ ಗೊಂದಲ ಎಬ್ಬಿಸಿಬಿಡುತ್ತಿದ್ದರು. ಆದರೆ ಅವರು ಅಷ್ಟೊಂದು ದಿವಸ ದಕ್ಕುತ್ತಿರಲಿಲ್ಲ ಮಠದಲ್ಲಿ! ಲೋಕಮಾನ್ಯ ತಿಲಕರನ್ನು

ಕಾಣಲಿಕ್ಕೆ ಯಾರೋ ಹೆಣ್ಣುಮಗಳೊಬ್ಬಳು ಬಂದು ತನ್ನ ದೂರುಗಳನ್ನೆಲ್ಲ ಹೇಳಿಕೊಂಡಳು. ತಿಲಕರು ಏನು, ಎಂತು ಮುಂತಾದ ಪ್ರಶ್ನೆಗಳನ್ನು ನೆಲ ಬರೆಯುತ್ತಲೇ ಕೇಳಿಕೊಂಡರೇ ಹೊರತು ಆ ಹೆಣ್ಮಗಳನ್ನು ಮೋರೆಯೆತ್ತಿ ನೋಡಲಿಲ್ಲ. ಜಗತ್ತಿನಲ್ಲಿ ಯಾರಾದರೂ ದೊಡ್ಡ ಮನುಷ್ಯರೆನಿಸುತ್ತಿದ್ದರೆ ಇಂದ್ರಿಯನಿಗ್ರಹವೇ ಅವರ ಸೂತ್ರವಾಗಿರಲಿಕ್ಕೆ ಸಾಕು. ಲಕ್ಷ್ಮಣನಿಗೆ ಸೀತಾದೇವಿಯ ಕಾಲೊಳಗಿನ ರುಳಿಕಾಲುಂಗರಗಳ ಹೊರತು ಮೂಗುತಿ, ಬುಗುಡಿ ಮೊದಲಾದ ಒಡವೆಗಳ ಗುರುತು ಸಿಗಲಿಲ್ಲವಂತೆ! ಅಂತೆಯೇ ಅಂಥ ಪರ ಕಥಾಮಹಿಮೆಯನ್ನು ಕೇಳುತ್ತ ಪುನೀತರಾಗುತ್ತಿರುವೆವು.

ತನ್ನದನ್ನು ಉಳಿಸಿಕೊಂಡು ಮಂದಿಯ ಬಂದು ಕಾಸನ್ನಾದರೂ ಎಳಕೊಂಡು ಬಂದವನೇ ಜಾಣನೆಂದೂ ವ್ಯವಹಾರ ಚತುರನೆಂದೂ ಈಗ ಜನರು ಕೊಂಡಾಡುವರು. ಆದರೆ ಒಳ್ಳೆಯವರಿಗೆ ಇದು ಸರಿದೋರುವದಿಲ್ಲ. ಕಲ್ಲು ತಕ್ಕಡಿಗಳ ತಗಲು ಮಾಡುವುದೂ ಮಾಪು ಅಳತೆಗಳನ್ನು ಕೊಂಡುಕೊಳ್ಳುವಾಗ ಬದಲಿಸುವುದೂ ಏಳು ಮೊಳ ಅರಿವೆಯನ್ನು ಎಂಟು ಮೊಳ ಮಾಡಿಕೊಡುವುದೂ ಅರಿಯದವನನ್ನು ಮಾತಿನಲ್ಲಿ ಸಿಕ್ಕಿಸಿ ಲಾಭ ಪಡೆಯುವುದೂ ವ್ಯವಹಾರದ ಧೋರಣವಾಗಿದೆ. ಹೀಗೆ ಮಾಡಿದರೇ ವ್ಯವಹಾರ! ಅವ್ವನಿಗೆ ಕೆಂಬಣ್ಣದ ಸೀರೆಯಂತೆ ಇವರಿಗೀ ಧೋರಣವು ಇರಲೇಬೇಕು. ಇಷ್ಟ ಬೆರಿಕೆ ಗತ್ತಿನಿಂದ ನಡೆದರೂ ಒಮ್ಮೊಮ್ಮೆ ತಾವೇ ಬಲೆ ಬೀಳುವುದುಂಟು. ಕೆಲವು ಜೊತೆಯವರೊಡನೆ ಮಾಸ್ತರರು ಇಂಡಿಗೆ ಹೋಗಿದ್ದರು. ಜೊತೆಯವರು ಎರಡು ಸೇರು ಮಿಠಾಯಿ ಕೊಂಡರು. ಒಂದು ರೂಪಾಯಿ ಕೊಟ್ಟು ಉಳಿದ ರೊಕ್ಕ ಇಸಗೊಂಡು ಬಂದರು. ನಿಲ್ದಾಣಕ್ಕೆ ಬಂದು ರೊಕ್ಕ ಎಣಿಸಿ ನೋಡಿದರೆ ಮಿಠಾಯಿಯವನು ತನ್ನ ರೊಕ್ಕ ಮುರಕೊಂಡಿದ್ದಿಲ್ಲ. ಅದನ್ನು ತಿಳಿದು ಮಾಸ್ತರರಿಗೆ ಖೇದವೆನಿಸಿತು. ಆ ದುಡ್ಡಿನಿಂದ ತೆಂಗಿನಕಾಯಿ ತರಿಸಿ ಹತ್ತರಕಿಯ ಗ್ರಾಮದೇವರ ಮುಂದ ಒಡೆಸಿದರು. ವಿದ್ಯಾರ್ಥಿಗಳಿಗೇನಾದರೂ ಸಿಕ್ಕರೆ ಅದನ್ನು ಅದರೊಡೆಯರ ಶೋಧ ನಡಿಸಿ ಅವರಿಗೆ ಮುಟ್ಟಿಸುವುದೂ ವಿದ್ಯಾರ್ಥಿಗಳ ಜೊತೆಗೆ ವಿದ್ಯಾರ್ಥಿಯಾಗಿ ಮಲಗಿಕೊಳ್ಳುವುದೂ ಅವರ ಸ್ವಭಾವವಾಗಿತ್ತು.

ಒಕ್ಕಲಿಗರಿಗೆ ಸುಗ್ಗಿಯಲ್ಲಿ ಕೆಲಸದ ಭರದಲ್ಲಿ ಬಹುಶಃ ಯಾರ ಗುರುತೂ ಹತ್ತುತ್ತಿರುವದಿಲ್ಲ. ಮಾಸ್ತರರು ಒಮ್ಮೆ ತಂಬಿಗೆ ತೆಗೆದುಕೊಂಡು ಮಳೆಗಾಲ

ವಿದ್ದುದರಿಂದ ಒಬ್ಬ ಮುಸಲ್ಮಾನರವನ ಹೊಲದೊಳಗೆ ಹೋಗಿದ್ದರು. ಅವನು ಮಾಸ್ತರರನ್ನು ಗುರುತಿಸದೆ ಬಾಯಿಗೆ ಬಂದಂತೆ ಬಯ್ದನು. ಮಾಸ್ತರರು ಆ ಶಬ್ದಗಳನ್ನು ಕಿವಿಯಲ್ಲಿ ಹಾಕಿಕೊಳ್ಳದೆ ಬಂದುಬಿಟ್ಟರು. ಅದನ್ನು ಕೇಳಿದ ಕೆಲವರು ಆ ಹೊಲದವನನ್ನು ನ್ಯಾಯುರಿಯೆ ಬಡಿದರು. ಮಾಸ್ತರರು ಆ ಸುದ್ದಿ ಕೇಳಿ ಮರಮರ ಮರುಗಿ ಆ ಹೊಲದವನ್ನು ಕರೆಯಿಸಿ ಕ್ಷಮೆ ಕೇಳಿಕೊಂಡರಂತೆ. ಯಾವನೋ ಕಬ್ಬಿನ ತೋಟದವನು ರಾಮದಾಸಸ್ವಾಮಿಗಳನ್ನು ಬಾರಕೋಲಿನಿಂದ ಹೊಡೆದಾಗ ಅದನ್ನು ಕೇಳಿ ಶಿವಾಜಿ ಮಹಾರಾಜರು ಸಿಟ್ಟಿನಿಂದ ಕತ್ತಿಯನ್ನು ಹಿರಿದರು. ತೋಟದವನನ್ನು ಕರೆಯಿಸಿ ಇವನನ್ನು ಯಾವ ಶಿಕ್ಷೆಗೀಡು ಮಾಡಲಿ? ಎಂದು ಗುರುಗಳನ್ನು ಕೇಳಿದರು. ಗುರುಗಳು ಶಿವಾಜಿಯ ಸಿಟ್ಟನ್ನು ಅಡಗಿಸಲು ಉಪದೇಶಿಸಿ ಆ ತೋಟದವನಿಗೆ ಕ್ಷಮಾಶಿಕ್ಷೆಯನ್ನೇ ಕೊಡಬೇಕೆಂದು ಹಾರಯಿಸಿದರು.

# ೮. ಮುಗಿತಾಯ

"ಒಂದೇ ಒಂದು ಜೀವದ ಉದ್ಧಾರವಾಗುವಂತಿದ್ದರೆ ಲಕ್ಷಸಾರೆಯಾದರೂ ಜನ್ಮವೆತ್ತಿ ಬರ-ವೆನು" —ಶ್ರೀ. ವಿವೇಕಾನಂದರು

ಈ ವರೆಗೆ ಹಿಂದಿನ ಆರೇಳು ಪ್ರಕರಣಗಳಲ್ಲಿ ಗೇವಣಸಿದ್ಧಪ್ಪನವರ ಜೀವಿತವನ್ನು ಅರಿತೆವು. ಅವರು ಬದುಕಿರುವ ಅವಧಿಯಲ್ಲಿ ತಮ್ಮನ್ನು ತಾವು ತಿದ್ದಿಕೊಳ್ಳುವ ಜೀವನದ ಅದ್ಭುತರಸಾಯನವನ್ನು ನಡೆಸಿದರು. ಆ ಕಾರಖಾನೆಯ ದೀಪಗಳ ಬೆಳಕಿನಲ್ಲಿ ಅದೆಷ್ಟೋ ಜನರು ತಮ್ಮನ್ನು ತಾವು ಕಂಡುಕೊಂಡರು; ಆ ಕಾರಖಾನೆಯಲ್ಲಿ ಅವಿರತವಾಗಿ ತಿರುಗುವ ಚಕ್ರಗಳಿಂದುಂಟಾದ ಗಾಳಿಗೆ ಅದೆಷ್ಟೋ ಜನರು ಚೇತನಗೊಂಡರು. ಆ ಕಾರಖಾನೆಯ ಎಂಜಿನದ ಕಾವಿನಿಂದ, ತಣ್ಣಗಾದ ಜೀವಗಳೆಷ್ಟೋ ಮಿಸುಕಾಡಿದರು. ಕೆಲವರು ನೋಡಿ ಕಲಿತರು, ಹಲವರು ಮಾಡಿ ಕಲಿತರು. ಒಬ್ಬರು ಕೇಳಿ ಕಲಿತರೆ, ಇನ್ನೊಬ್ಬರು ಹೇಳಿಸಿಕೊಂಡು ಕಲಿತರು. ಮತ್ತೊಬ್ಬರಿಗೆ ಸಹವಾಸದ ಫಲವು ಉಡಿಯಲ್ಲಿ ಬಿದ್ದಿತು. ಮಗುದೊಬ್ಬರಿಗೆ ಅರಿಯದಂತೆ ಅವರ ಪ್ರಭಾವವು ಸಂಚರಿಸಿತು. ರೇವಣಸಿದ್ದಪ್ಪನವರ ಬಾಳು ಒಂದು ಸಣ್ಣ ಹಣತಿಯಂತಿದ್ದಿತು. ಹಣತಿಯ ನೆಲೆಯು ಹಳ್ಳಿಯಾಗಿದ್ದಿತು. ಅದರ ಬೆಳಕು ಹಳ್ಳಿಗರಿಗೆ ಮಾತ್ರ ಕಣ್ಣುಕೊಟ್ಟಿತು. ಅಂತೆಯೇ ಅವರು ಹಳ್ಳಿಯಮಹಾತ್ಮರು ಮಹಾತ್ಮರು ಜನಾಂಗವನ್ನೊ ಮತಗಳನ್ನೋ ಉದ್ಧರಿಸುವ ಅದ್ಭುತ ಶಕ್ತಿಯನ್ನೂ ವಿಶಾಲವ್ಯಾಪ್ತಿಯನ್ನೂ ಪಡಕೊಂಡು ಬಂದಿರುತ್ತಾರೆ. ಆದರೆ ಹಳ್ಳಿಯ ಮಹಾತ್ಮನು ಹಳ್ಳಿಯ ಜೀವನಕ್ಕೊಂದು ಬಣ್ಣಕೊಟ್ಟು ಹಣ್ಣಿಸುತ್ತಾನೆ. ಅವರು ತಮ್ಮಲ್ಲಿದ್ದ ಎಣ್ಣೆ ತೀರುವ ವರೆಗೆ ಮಂದವಾಗಿಯಾದರೂ ಉಪಯುಕ್ತವಾದ ಬೆಳಕು ಬೀರಿ ದಿನಾಂಕ ೨೩–೨–೧೯೨೫ ನೇ ದಿವಸ ಇಹಲೋಕದ ಯಾತ್ರೆಯನ್ನು ಕೊನೆಗಾಣಿಸಿದರು.

ಅವರು ಬದುಕಿದ್ದುದು ಸುಮಾರು ಮೂವತ್ತಾರು ವರುಷ; ಶಿಕ್ಷಕರಾಗಿದ್ದುದು ಹದಿನಾರು ವರುಷ. ಅವರ ಕರ್ಮ, ಸುಧಾರಣೆ, ಶಿಕ್ಷಣ, ಸಂಸಾರ ಮೊದಲಾದವುಗಳನ್ನೆಲ್ಲ ಈ ಅಲ್ಪಾಯುಷ್ಯದಲ್ಲಿಯೇ ನೆರವೇರಿಸಿದರು. ಅವರು ತಮ್ಮ ಹುಟ್ಟಿನೊಡನೆ ತಂದ ಸಂದೇಶವನ್ನು ಯಾರಿಗೆ ಮುಟ್ಟಿಸಬೇಕಾಗಿದ್ದಿತೋ ಅವರಿಗೆ ಮುಟ್ಟಿಸಿದ ಕೂಡಲೇ ಹೊರಟು ಹೋದರು. ಅವರು

ಬದುಕಿರುವಾಗ ಅವರನ್ನು ಅರಿತವರು ಕಡಿಮೆ. ಆದರೆ ಅವರ ತರುವಾಯ ಅವರನ್ನು ಅರಿತವರು ಅಸಂಖ್ಯ ಜನರು.

ಪ್ರಾಯದ ಹೆಂಡತಿಯನ್ನೂ ಚಿಕ್ಕ ವಯಸ್ಸಿನ ಮಕ್ಕಳನ್ನೂ ಬಯಲಲ್ಲಿ ಬಿಟ್ಟು ಹೋದ ರೇವಣಸಿದ್ಧಪ್ಪನವರ ಸ್ಮಾರಕವಾಗಿ ಅವರ ಗದ್ದುಗೆಯಾಯಿತು, ಪೂಜಾವ್ಯವಸ್ಥೆಯಾಯಿತು. ಅವರ ಹೆಸರಿನಿಂದ ವಾಚನಾಲಯವಾಯ್ತು. ಅವರ ಹೆಸರು ಹೇಳಿ ಕೃತಜ್ಞತೆಯನ್ನು ತೋರಿಸುವ ತರುಣವೃಂದವು ತಲೆಯೆತ್ತಿತು. ಅವರ ಹೆಂಡಿರು ಮಕ್ಕಳಿಗೆ ಸಾರ್ಥಕವಾದ ನೆರವು ಸಿಕ್ಕಿತು ಅವರ ಜೀವನಕ್ಕೆ ಜಗಲಿಯಾಗಿ ಹತ್ತರಕಿ ಗ್ರಾಮವು ಕೃತಾರ್ಥವಾಯ್ತು. ಅವರಿಗೆ ತಮ್ಮ ಕೃತಜ್ಞತೆಯನ್ನು ಹಲವು ಮುಖಗಳಿಂದ ತೋರ್ಪಡಿಸಿ ಹತ್ತರಕಿಯವರು ಧನ್ಯರಾದರು. ಅವರ ಪವಿತ್ರವಾದ ಜೀವಿತದಿಂದ ಅವರ ವಂಶಕ್ಕೆ ಶುಭ್ರಕೀರ್ತಿಯುಂಟಾಯಿತು. ಮಕ್ಕಳಿಗೆ ಪುಣ್ಯದೇಹವು ಪ್ರಾಪ್ತಿಸಿತು. ಅವರ ಪತ್ನಿಯವರು ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವನ ಕೈಹಿಡಿದು ದಿವ್ಯಸುಮಂಗಲೆಯರಾದರು.

ಶಿಕ್ಷಕರಿಗೊಂದು ಹೆಮ್ಮೆಯ ವಸ್ತುವಾಗಿಯೂ, ಸರಿಕರಿಗೆ ಸವೆಯದ ಸಂಪತ್ತಾಗಿಯೂ, ಶಿಷ್ಯರಿಗೆ ಅಚಲ ತಾರೆಯಾಗಿಯೂ ಬೆಳಗುವ ರೇವಣಸಿದ್ಧಪ್ಪನವರ ಕೀರ್ತಿ ಕಾಯವನ್ನೇ ಕಲ್ಪಿಸಿಕೊಳ್ಳಬೇಕಲ್ಲದೆ, ಅವರ ಮೂರ್ತಿಯಾಗಲಿ ಭಾವಚಿತ್ರವಾಗಲಿ ಕಾಣಸಿಗಲಾರದು. ಆದರೆ ಅವರ ಜೀವನಚಿತ್ರವು ಅದೆಷ್ಟೋ ಆದರ್ಶಜೀವಿಗಳನ್ನು ಮೊಳೆಸಿಕೊಡುವ ಬೀಜದ ತೆನೆಯಂತಿದೆ. ಆ ತೆನೆಯು ಎರಡು ಪಟ್ಟಿಗಳಿಂದಲೂ ಹುಳುಕುಗೊಳ್ಳದೆ ಹಿಟ್ಟಾಗದೆ ಹಾಳಾಗದೆ ಉಳಿದು ನಿಂತಿದೆ. ಅದನ್ನು ಒಡೆದು ನಾಡಿನ ತುಂಬ ಬೀಜವೂರುವ ತಲೆಯು ಇದೀಗ ಬಂದಂತಿದೆ.

ಅವರ ಜೀವನವು ಅದ್ಭುತವಾದ ಏರಿಳಿವುಗಳಿಂದ ಕೂಡಿದ ಭವ್ಯ ಪರ್ವತದಂತಿಲ್ಲವಾದರೂ ಬೆಳುವಲನಾಡಿನ ಹೊಲಗದ್ದೆಗಳಂತೆ ಸಮಪಾತಳಿಯುಳ್ಳದ್ದಾಗಿರುವದರಿಂದ ವರುಷ ವರುಷ ಸಾಕಷ್ಟು ಬೆಳೆಕೊಡುವಂಥದು. ಸಹ್ಯಾದ್ರಿಯಲ್ಲಿಯೋ ಹಿಮಾಲಯದಲ್ಲಿಯೋ ಉಗಮಿಸಿದ ನದಿಯಂತೆ, ಕಟ್ಟಿ–ಕಾಲುವೆ, ವ್ಯವಹಾರ ಸಂಚಾರಗಳ ಸಾಧನವಾಗದಿದ್ದರೂ ಸಣ್ಣ ಹಳ್ಳದಂತೆ ಬುಡಿಕೆಯ ಬಾವಿಗೂ, ಮನುಷ್ಯ–ಪ್ರಾಣಿಗಳಿಗೂ ಅವಶ್ಯವಾದ ಜಲಪ್ರಾಣವನ್ನಿತ್ತು ಬದುಕಿಸುವಂಥದು. ಅವರು ಶಿಕ್ಷಕರಾಗಿ ಶಿಕ್ಷಣಕ್ಕೆ ಪರಮೋಪಕಾರವಾಗಬಹುದಾದಂಥ ಗ್ರಂಥ ಬರೆಯಲಿಲ್ಲ; ಶರಣ ಜೀವಿಗಳಾಗಿ ತಮ್ಮ ಅಂತ

ರಂಗದ ಅಗಾಧ ಅನುಭವಗಳನ್ನು ಪ್ರಕಟಗೊಳಿಸುವ ಹಾಡುಗಳನ್ನಾಗಲಿ ವಚನಗಳನ್ನಾಗಲಿ ಹೆಣೆಯಲಿಲ್ಲ. ರಾಜಕಾರಣದಲ್ಲಾಗಲಿ ಧರ್ಮಕಾರಣ ದಲ್ಲಾಗಲಿ ಮನಸೆಳೆಯುವಂಥ ಪ್ರಯೋಗವನ್ನಾಗಲಿ ಸ್ಥಿತ್ಯಂತರವನ್ನಾಗಲಿ ಮಾಡಲಿಲ್ಲ. ಕವಿಯೆನಿಸಿಕೊಳ್ಳದಿದ್ದರೂ ಸಾಹಿತಿಯೂ ಆಗಲಿಲ್ಲ ಶ್ರೀಮಂತನೆನಿಸಿಕೊಳ್ಳದಿದ್ದರೂ ಉದ್ಯೋಗ ಶೀಲರಾಗಲಿಲ್ಲ. ಎಲ್ಲರೂ ಹುಟ್ಟುವಂತೆ ಹಳ್ಳಿಯ ಒಂದು ಮೂಲೆಯಲ್ಲಿ ಮೂಡಿ, ತಾವಾಗಿಯೇ ಬೆಳೆದು ತಮ್ಮ ಬದುಕು ಮಾತ್ರ ಕಟ್ಟಿಕೊಳ್ಳುತ್ತಿದ್ದರಂತೆ ಕಾಣಿಸಿಕೊಂಡು ಒಮ್ಮೆಲೆ ಕಣ್ಣುಮರೆಯಾದರು ! ತೀರಿತು ಅವರ ಜೀವನಕಥೆ. ಈ ಕಥೆಯು ಕಣ್ಣು ಕುಕ್ಕಿಸುವಂಥದೇನೂ ಕಾಣಿಸಲಿಕ್ಕಿಲ್ಲ. ಆದರೆ ಕಣ್ಣೇ ಇಲ್ಲದ ಕುರುಡರಿಗೆ ಕಣ್ಣು ತೆರೆಯಿಸಿದ ಅವರ ಪ್ರಶಾಂತ ಜೀವನದಿಂದ ವಿಪುಲವಾದ ಪ್ರಯೋಜನ ಗಳುಂಟಾಗಿದ್ದರಲ್ಲಿ ಸಂಶಯವಿಲ್ಲ. ಇಂಥವರು ಎಷ್ಟೆಷ್ಟು ಹೆಚ್ಚು ಹೆಚ್ಚಾಗಿ ಹುಟ್ಟಿಬರುವರೋ ಅಷ್ಟಷ್ಟು ದೇಶಕಲ್ಯಾಣವೂ ಮಾನವ ಕಲ್ಯಾಣವೂ ಆಗಿ ಬಿಡುವುದು ನಿಶ್ಚಯವೇ ಸರಿ.

ಯಾಕಂದರೆ, ತನ್ನನ್ನು ತಾನು ತಿದ್ದಿಕೊಳ್ಳದೆ ಹೆರವರನ್ನು ಮಾತ್ರ ತಿದ್ದುವವಕ್ಕೆ ಹೊರಟ ಹೇಸಿಕಸಬಾರಿಗೆಯಿಂದ ಜಗತ್ತಿನ ಹೊಲಸು ಸರಿಯು ಲಾರದು. ಒಂದು ಕಡೆಯ ಹೊಲಸು ಸರಿಯುವಷ್ಟರಲ್ಲಿ ಇನ್ನೊಂದು ಕಡೆಗೆ ತಿಪ್ಪೆಯಾಗಿ ನಿಲ್ಲುತ್ತದೆ. ಇಂಥ ತಿದ್ದುವಳಿಯು ಎಷ್ಟು ಕಡೆ, ಎಷ್ಟು ಕಾಲ, ಎಷ್ಟು ಜನರಿಂದ ನಡೆದರೂ ಏನೂ ಪ್ರಯೋಜನವಾಗಲಾರದು. ಹೊಲಸು ಹುಗಿದು ಗೊಬ್ಬರ ಮಾಡಿಕೊಡುವ ಜೀವನಪ್ರಯೋಗಗಳನ್ನು ನಡೆಸುವ ರೇವಣಸಿದ್ಧಪ್ಪನವರಂಥ ಹಳ್ಳಿಯ ಮಹಾತ್ಮರಿಂದ ಮಾತ್ರ ಜಗತ್ತು ನಿರ್ಮಲ ವಾಗಬಲ್ಲದಲ್ಲದೆ ಇನ್ನಾರಿಂದಲೂ ಸಾಧ್ಯವಿಲ್ಲ.

ಶ್ರೀ ವಿವೇಕಾನಂದರಿಗೆ ಯಾರೋ ಕೇಳಿದರಂತೆ-- "ಜಗತ್ತು ಯಾಕೆ ಸುಧಾರಿಸಲೊಲ್ಲದು ? " ಅದಕ್ಕವರು ಮರುನುಡಿನುದೇನಂದರೆ— " ಪ್ರತಿ ಯೊಬ್ಬರೂ ಹೆರರನ್ನೇ ಸುಧಾರಿಸಬೇಕೆಂದು ಮುಂದುವರಿಯುವ ಕಾರಣ ದಿಂದ " ಪ್ರತಿಯೊಬ್ಬರು ತಮ್ಮನ್ನು ತಾವು ಸುಧಾರಿಸಿಕೊಂಡರೆ ಮಾತ್ರ ಜಗತ್ತು ಸುಧಾರಿಸುವದೆಂದು ಅವರ ಮರುನುಡಿಯ ಅರ್ಥವು. ಈ ಪ್ರಕರಣದ ಆರಂಭಕ್ಕೆ ಅವರದೇ ಇನ್ನೊಂದು ಮಾತನ್ನು ಉಲ್ಲೇಖಿಸಿದ್ದೇವೆ. ಆ ಮಾತಿನ ಅರ್ಥವೂ ಇದೇ ಯೆನ್ನುವುದು ತುಸು ವಿಚಾರಿಸಿದರೆ ಕಂಡುಬರು ವದು. ಲಕ್ಷಸಾರೆ ಜನ್ಮವೆತ್ತಿ ಬಂದರೂ ಪರರನ್ನು ತಿದ್ದುವ ಕಾರ್ಯದೊಳ

ಗಿನ ಒಂದೇ ಒಂದು ಜೀವವನ್ನು ಸಹ ಉದ್ಧರಿಸುವ ಕೆಲಸವಾಗಲಾರದೆನ್ನು ವುದೇ ಆ ಮಾತಿನ ಸಾರಾಂಶವು. "ಪರಚಿಂತೆ ನಮಗೇತಕಯ್ಯ. ನಮ್ಮ ಚಿಂತೆ ನಮಗೆ ಹಾಸಲುಂಟು ಹೊದೆಯಲುಂಟು." ಎಂದು ಹೇಳುವ ಬಸ ವಣ್ಣನವರ ವಚನವೂ ಸ್ವಸುಧಾರಣೆಯ ದಾರಿಯನ್ನೇ ತೋರಿಸುತ್ತದೆ. ಆದರೆ ಹಾಸಲೂ ಹೊದೆಯಲೂ ಸಾಕಾಗುವಷ್ಟಿರುವ ಸ್ವಚಿಂತೆ ಯಾವುದಿರಬೇಕು, ಎಂಥದಿರಬೇಕು ಎಂಬ ತೊಡಕು ಏಳುವುದು ಸಹಜ. ಅದಕ್ಕೂ ಶ್ರೀ ಬಸವಣ್ಣನವರು ಉತ್ತರವಿತ್ತಿದ್ದಾರೆ "ಕೂಡಲಸಂಗಯ್ಯನೊಲಿದಾನೋ ಇಲ್ಲವೋ ಎಂಬುದೇ ಚಿಂತೆ" ಯೆಂಬ ಮಾತಿನಲ್ಲಿಯೂ, "ಎನಗೆ ನಮ್ಮ ಕೂಡಲಸಂಗಮದೇವರ ನೆನೆವ ಚಿಂತೆ" ಯೆಂಬ ಮಾತಿನಲ್ಲಿಯೂ ನಮಗೆ ಬೇಕಾದ ಉತ್ತರಸಿಕ್ಕುತ್ತದೆ. ಆ ಚಿರಂತನ ಚಿಂತೆಯಿಂದ ಮುಪ್ಪು ಅಡಸದೆ, ಚಿರಯೌವ್ವನವು ಪ್ರಾಪ್ತವಾಗುತ್ತದೆ. ಅದೊಂದು ಚಿಂತೆಯಿಂದ ಮನುಷ್ಯನ ಕಿಲ್ಮಿಷಗಳೆಲ್ಲ ಕದಲುವವು. ಕೊಳೆಗಳೆಲ್ಲ ತೊಳೆಯುವವು. ಆಗ ಆ ವ್ಯಕ್ತಿಯ ತಿದ್ದುವಿಕೆಯು ನಿಜವಾಗಿಯೂ ಪೂರಯಿಸುತ್ತದೆ. ತನ್ನೊಳಗಿನ ಕೊಳೆ ಕಾಣಿಸುವಷ್ಟು ನಿಚ್ಚಳವಾಗಿ ಅನ್ನಿಗರೊಳಗಿನ ಕೊಳೆಕಾಣಸಿಗದು. ಕೊಳೆ ಎಲ್ಲಿದೆ ಎಷ್ಟಿದೆಯೆಂಬುದನ್ನರಿಯದೆ ಅದನ್ನು ತೊಳೆಯುವ ಕೆಲಸ ಸುಗಮ ವಾಗದು. ಆದ್ದರಿಂದ ಸ್ವಸುಧಾರಣೆಯೇ ಕರ್ತವ್ಯವೆಂದೂ ಅದಕ್ಕೆ ಪರ ಮಾತ್ಮಚಿಂತನವೇ ಉಪಾಯವೆಂದೂ ಸಿದ್ಧವಾಗುತ್ತದೆ. ನಮ್ಮ ರೇವಣ ಸಿದ್ದಪ್ಪನವರು ತಮ್ಮ ಕರ್ತವ್ಯವನ್ನು ಅರಿತಿದ್ದರೆಂದೂ, ಅವರು ಪರಮಾತ್ಮ ಚಿಂತನದಿಂದ ಸ್ವಸುಧಾರಣೆ ಮಾಡಿಕೊಂಡರೆಂಥೂ ಅವರ ಜೀವಿತವನ್ನು ಅಭ್ಯಸಿಸಿದವರಿಗೆ ಸ್ಪಷ್ಟವಾಗುತ್ತದೆ. ಹೀಗೆ ಅವರು ಸ್ವಸುಧಾರಣೆಯ ನಿರಂತರ ಕರ್ಮವನ್ನೆಸಗುತ್ತಲಿರುವಾಗ ಸುತ್ತಲಿನವರು ಅವರ ಆ ಸಾಹಸ ವನ್ನೂ, ಪರಿಶ್ರಮವನ್ನೂ, ಅವರು ಸಂಪಾದಿಸಿದ ಯಶಸ್ಸನ್ನೂ ಕಂಡು ಅವ ರನ್ನು ಅನುಕರಿಸಿದರು; ಅನುಸರಿಸಿದರು. ಹಾಗೆ ಅನುಕರಿಸಿ ಅನುಸರಿಸುವ ಜೀವಿಗಳ ಅಲ್ಪಾನುಭವವು ಸಹ ಪರಮಪ್ರಯೋಜನವಾಗಿರುವುದರಿಂದ ಅಲ್ಲಿ ಸ್ನೇಹವೂ ಗೋಷ್ಠಿಯೂ ಕ್ರಮವಾಗಿ ಕಾಣಿಸಿಕೊಂಡು ಅಲ್ಲೊಂದು ಶಿವಾನುಭವಮಂಟಪವು ನಿರ್ಮಿತವಾದರೆ ಆಶ್ಚರ್ಯವೇನು ?

ಇಂಥದೊಂದು ಮಂಟಪವು ರೇವಣಸಿದ್ದಪ್ಪನವರ ಸುತ್ತಲೂ ನಿರ್ಮಾಣ ಗೊಂಡಸಹಾಗಿತ್ತು. ಅಂತೆಯೇ ಅವರು ಹಳ್ಳಿಯ ಮಹಾತ್ಮ. ಆ ಹಾದಿ ಹಾವಸೆ

ಗಲ್ಲಿನದು. ಹಾವಸೆಗಲ್ಲನು ಮೆಟ್ಟಿ ನೆಲೆಯ ಕಾಣಲಿಕ್ಕಾಗದೆಂದು ಬಸವಣ್ಣನವರಂಥವರಿಗೂ ಮೊದಮೊದಲಿಗೆ ತೋರಿದ್ದರಲ್ಲಿ ಸಂಶಯವಿಲ್ಲ. ಆದರೆ ಅಂಥ ಹಾದಿಯಲ್ಲಿಯೂ ಸಾಹಸದಿಂದ ಮುಂದುವರಿದು ನೆಲೆ ಕಂಡವನನ್ನು ಕುರಿತು–

**ಹಾಸಗಲ್ಲಿನ ವ್ಯಾಲ ಹಾಯ್ದು ಹೋದವನ್ಯಾರ ?**
**ಪಾದ ಮೂಡ್ಯಾವ ಪರಿಪರಿ । ಬಲಭೀಮ ।**
**ಹಾಯ್ದು ಹೋಗ್ಯಾನ ಜಳಕಕ ॥—**

ಎಂದು ಹಾಡಿಕೊಳ್ಳಬಹುದಾಗಿದೆ. ಅಸಾಧ್ಯವಾದ ಹಾವಸೆಗಲ್ಲಿನ ಹಾದಿಯನ್ನೂ ನಡೆಯಬಹುದೆಂದೂ ಅಂಥ ಸಾಹಸವನ್ನು ಮಾಡಲಿಕ್ಕೆ ಬಲಭೀಮನಂಥವರೇ ಬೇಕೆಂದೂ ಅವನ ಸಾಹಸದ ಹೆಜ್ಜೆಗಳೆಲ್ಲ ಹಿಂದಿನವರಿಗೆ ಮಾರ್ಗದರ್ಶಕವಾಗುವವೆಂದೂ ಹೇಳಿದಂತಾಯಿತಲ್ಲವೇ? ಹಳ್ಳಿಯ ಮಹಾತ್ಮರಾದ ರೇವಣಸಿದ್ದಪ್ಪನವರು ಸ್ವಸುಧಾರಣೆಯ ಜಳಕಕ್ಕೆ ಬಲಭೀಮನಂತೆ ಹಾಯ್ದು ಹೋಗಿ ಅಸಾಧ್ಯವನ್ನೂ ಸುಸಾಧ್ಯವನ್ನಾಗಿ ಮಾಡಿಕೊಂಡು ಹಿಂದಿನವರಿಗೆ ಮಾರ್ಗದರ್ಶನ ಮಾಡುವಂಥ ಹೆಜ್ಜೆಗಳನ್ನು ಮೂಡಿಸಿ ಹೋಗಿದ್ದಾರೆ. ಇದೇ ಅವರ ಜೀವಿತದ ರಹಸ್ಯವಾಗಿದೆ.

ಇಂಥ ಅಮೌಲ್ಯವಾದ ಜೀವಿತ ರಹಸ್ಯವನ್ನು ತೋರ್ಪಡಿಸುವ ಕಾರ್ಯವು ಒಂದು ಹಳ್ಳಿಯಲ್ಲಿ, ಒಬ್ಬ ಸಾಮಾನ್ಯ ಶಿಕ್ಷಕನಿಂದ, ಬರಿಯ ಹದಿನಾರು ವರುಷಗಳ ಅವಧಿಯಲ್ಲಿ, ತೀರ ಹುಂಬರೆನಿಸಬಹುದಾದ ಹತ್ತರಕಿಯ ಜನರ ಪರಿಸರದಲ್ಲಿ, ಪಾರತಂತ್ರ್ಯ–ಅಶಿಕ್ಷತೆಗಳ ನೆಲೆವೀಡಾದ ಕನ್ನಡದ ಒಂದು ಮೂಲೆಯಲ್ಲಿ ಸಹಜವಾಗಿ, ಸ್ವಾಭಾವಿಕವಾಗಿ ಜರುಗಿ ಬಿಟ್ಟಿತೆನ್ನುವ ಮಾತು ಸಣ್ಣದೆನಿಸಲಾರದು. ಅದೊಂದು ಪವಾಡದಂತೆ ಸಾಧಿಸಿತೆಂದರೂ ಅದು ಕನ್ನಡ ನಾಡಿನ ಮಣ್ಣಿನ ಗುಣವೇ ಸರಿ; ಶರಣರು, ದಾಸರು, ಸಿದ್ಧಕವಿಗಳು, ವರದರಾಜರು ಸಿದ್ಧಾಟಿಕೆ ಆಡಿದ ಆಡುಂಬೊಲವಾದ ಈ ಕನ್ನಡ ನಾಡಿನಲ್ಲಿ ಇಂಥ ಅಮೌಲ್ಯ ಜೀವಿತ ರಹಸ್ಯಗಳು ಪ್ರಕಟವಾಗದೆ ಇನ್ನೆಲ್ಲಿ ಪ್ರಕಟವಾಗಬೇಕು? ನಮ್ಮ ಕಣ್ಣು ಕಾಣದ ಜೀವಿತ ರಹಸ್ಯಗಳೆಷ್ಟೋ ಇರಬಹುದು; ಕಿವಿಕೇಳದ ಜೀಣತ ರಹಸ್ಯಗಳೆಷ್ಟೋ ಇರಬಹುದು. ಅವೆಲ್ಲವೂ ನಮ್ಮ ಈ 'ಹಳ್ಳಿಯ ಮಹಾತ್ಮ'ನ ಪ್ರಚೋದನೆಯಿಂದ ಪ್ರಕಟವಾಗಬಲ್ಲವಾದರೆ ಅದೂ ಒಂದು ರೇವಣಸಿದ್ದಪ್ಪನವರ ಮಾಹಾತ್ಮ್ಯವೇ ಸರಿ.

— ಜಯ ಭುವನೇಶ್ವರೀ —